# ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕಿ

ಬಾಣಗಾರ ಗೌರಮ್ಮ

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ







ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

280

# ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕಿ

ಬಾಣಗಾರ ಗೌರಮ್ಮ

ಮಾರ್ಗದರ್ಶಕರು

ಡಾ.ಶಿವಾನಂದ ಎಸ್. ವಿರಕ್ತಮಠ

ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ









ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಸಂಶೋಧಕರ ಪ್ರಮಾಣ ಪತ್ರ

ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು (ಕೂಡ್ಲಿಗಿ ಮತ್ತು ಹೊಸಪೇಟೆ ಡಿಪೋಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ.ಶಿವಾನಂದ ಎಸ್ ವಿರಕ್ತಮಠ, ಪ್ರವಾಚಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

B. Gowri

ಬಾಣಗಾರ ಗೌರಮ್ಮ
ಸಂಶೋಧಕಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30/7/07
ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಬಾಣಗಾರ ಗೌರಮ್ಮ** ಇವರು ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು (ಕೂಡ್ಲಿಗಿ ಮತ್ತು ಹೊಸಪೇಟೆ ಡಿಪೋಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ.ಶಿವಾನಂದ ಎಸ್ ವಿರಕ್ತಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30.7.07
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ ಒಂದು



## ಅಧ್ಯಾಯ ಎರಡು

ಅಧ್ಯಾಯ ಮೂರು

**ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು / ೩೪**

೩.೧ ಸಮಾಜದ ದೃಷ್ಟಿಯಲ್ಲಿ ಮಹಿಳಾ ಕಂಡಕ್ಟರ್‌ಗಳು

ಅ. ಎರಡನೆಯ ದರ್ಜೆಯ ವೃತ್ತಿಯಾಗಿ

ಆ. ಸಾಂಪ್ರದಾಯಿಕ ದೃಷ್ಟಿಯಲ್ಲಿ

ಇ. ಹಿಂದೂ ಸಂಪ್ರದಾಯ

ಈ. ಸಹೋದ್ಯೋಗಗಳ ದೃಷ್ಟಿಯಲ್ಲಿ ಮಹಿಳಾ ಕಂಡಕ್ಟರ್‌ಗಳು

೧ ಕಂಟ್ರೋಲರ್

೨ ಪುರುಷ ಡ್ರೈವರ್ ಮತ್ತು ಕಂಡಕ್ಟರ್‌ಗಳ ದೃಷ್ಟಿಯಲ್ಲಿ

೩ ಮ್ಯಾನೇಜರ್

೪ ಟ್ರಾಫಿಕ್ ಇನ್ಸ್‌ಫೆಕ್ಟರ್

೫ ಪ್ರಯಾಣಿಕರ ದೃಷ್ಟಿಯಲ್ಲಿ

೩.೨ ಕೌಟುಂಬಿಕ ಸಮಸ್ಯೆ

ಅ. ಆರ್ಥಿಕ ಅಭದ್ರತೆ

ಆ. ಗಂಡಂದಿರ ಆರ್ಥಿಕ ಸ್ಥಿತಿ

ಇ. ಕುಟುಂಬದ ಸದಸ್ಯರ ಜೊತೆ ಹೊಂದಾಣಿಕೆ ಸಮಸ್ಯೆ

೩.೩ ವೈವಾಹಿಕ ಸಮಸ್ಯೆಗಳು

ಅ. ಲೈಂಗಿಕ ತೃಪ್ತಿ

ಆ. ಸಂತಾನೋತ್ಪತ್ತಿ

ಇ. ವಿವಾಹಕ್ಕೆ ತೊಂದರೆ

ಈ. ಶೀಲದ ಪರಿಕಲ್ಪನೆ

೩.೪ ಆರೋಗ್ಯ ಸಮಸ್ಯೆ

ಅ. ಶ್ವಾಸಕೋಶದ ತೊಂದರೆ

ಆ. ಋತುಚಕ್ರದಲ್ಲಿ ಏರುಪೇರು

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ದೃಷ್ಟಿಕೋನ ಮತ್ತು ವೈಧಾನಿಕತೆ

೧.೪ ಸಾರಿಗೆ ಸಂಸ್ಥೆ

೧.೫ ಸಾರಿಗೆ ಸಂಸ್ಥೆಯಲ್ಲಿ ಲಿಂಗಾಧಾರಿತ ಕಾರ್ಯ ಸ್ವರೂಪ

೧.೬ ಸಾರಿಗೆ ಸಂಸ್ಥೆಯಲ್ಲಿ ಮಹಿಳೆಯರ ಪ್ರವೇಶ

೧.೭ ಈ ವರೆಗಿನ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

### ಪ್ರಸ್ತಾವನೆ

ಉದ್ಯೋಗವೆನ್ನುವುದು ಸಾರ್ವಜನಿಕ ವಲಯವಾಗಿದೆ. ಸಾರ್ವಜನಿಕ ವಲಯದ ಉದ್ಯೋಗಗಳಲ್ಲಿ ಮಹಿಳೆಯರು ಹೆಚ್ಚಾಗಿ ಕಂಡುಬರುವುದಿಲ್ಲ. ಸಾರ್ವಜನಿಕ ವಲಯದಲ್ಲಿ ಮಹಿಳೆಯರು ಕೆಲಸ ಮಾಡುವುದನ್ನು ಈ ಪುರುಷ ಪ್ರಧಾನ ಸಮಾಜ ಒಪ್ಪುವುದಿಲ್ಲ ಅಥವಾ ಪ್ರೋತ್ಸಾಹಿಸುವುದಿಲ್ಲ. ಸಮಾಜದ ಸಾಂಪ್ರದಾಯಿಕ ಮೌಲ್ಯಗಳು ಸ್ತ್ರೀ-ಪುರುಷರ ಉದ್ಯೋಗದ ನಡುವೆ ಬೇಧವನ್ನು ಕಲ್ಪಿಸಿ, ತಾರತಮ್ಯ ಹಾಗೂ ನಿರ್ಬಂಧಗಳನ್ನು ಹಾಕಿವೆ. ಮಹಿಳೆಯರು ದೈಹಿಕವಾಗಿ 'ದುರ್ಬಲರು', 'ಶಕ್ತಿಹೀನರು', ಮುಂತಾದ ಪಟ್ಟಗಳನ್ನು ಕಟ್ಟಿ ಇವರಿಗೆ ಭೌತಿಕವಾಗಿ ಕಷ್ಟದಾಯಕವಾದ ಕೆಲಸ ಮಾಡಲು ಸಾಧ್ಯವಿಲ್ಲವೆಂದು ಅವರನ್ನು ಎರಡನೆಯ ದರ್ಜೆ ಪ್ರಜೆಗಳಂತೆ ನಡೆಸಿಕೊಂಡು ಬರುತ್ತಿದೆ. ಈ ಸಮಾಜವು ಪುರುಷರಿಗೆ ಬಲಿಷ್ಠರು, ಶಕ್ತಿವಂತರು ಮುಂತಾದ ಪಟ್ಟಗಳನ್ನು ಕಟ್ಟಿ ಇವರು ಎಂತಹ ಶ್ರಮವಿರುವ ಕೆಲಸವನ್ನು ಮಾಡಬಲ್ಲರೆಂಬ ನಂಬಿಕೆಯನ್ನು ಸೃಷ್ಟಿಸಿದ ಪುರುಷರನ್ನು ಮೊದಲು ಪ್ರಜೆಯಂತೆ ನಡೆಸಿಕೊಂಡು ಬರಲಾಗುತ್ತಿದೆ. ಮಹಿಳೆಯರಿಗೆ ಕೌಟುಂಬಿಕ ವಲಯಗಳಂತಹ ಕೆಲಸಗಳನ್ನು ಮೀಸಲಿರಿಸಿದೆ. ಪುರುಷರು ಹೊರಗಡೆ ಹೋಗಿ ದುಡಿದು ಆದಾಯಗಳಿಸಿ ಕುಟುಂಬವನ್ನು ನಿರ್ವಹಿಸಬೇಕು. ಸ್ತ್ರೀಯರು ಮನೆಯೊಳಗೆ ಇದ್ದು ಮನೆ ಕೆಲಸ ಮತ್ತು ಹಿರಿಯರ, ಮಕ್ಕಳ ಸೇವೆಯನ್ನು ಮಾಡಿಕೊಂಡು ಇರಬೇಕು ಎಂದು ಹೇಳುತ್ತದೆ. ಮಹಿಳೆಯರು ಹೊಸ್ತಿಲು ದಾಟುವುದು ಮನೆತನದ ಗೌರವಕ್ಕೆ ದಕ್ಕೆಯಾಗುತ್ತದೆ ಎಂದು ಮನೆಯ ಅಂಗಳ ಕಸವನ್ನು ಗಂಡಸರು ಅಥವಾ ಆಳುಗಳು ಮಾತ್ರ ಮಾಡುತ್ತಿದ್ದರು. ಮಹಿಳೆಯರು ಪರಪುರುಷರನ್ನು ಮಾತನಾಡಿಸಬಾರದು ಪರಪುರುಷರ ಮುಂದೆ ಹಾದುಹೋಗಬಾರದು ಎಂದು

ಪುರುಷನ ಜೊತೆ ಸಹ ಜೀವನ ಮಾಡಬೇಕಾಗಿರುವುದರಿಂದ ಬೇರೆ ದಾರಿಯಿಲ್ಲದೆ ಯಾವ ಕೆಲಸ ಬೇಕಾದರೂ ಮಾಡಿ ಜೀವನ ಸಾಗಿಸಬೇಕಾದಂತಹ ಪರಿಸ್ಥಿತಿಯನ್ನು ಈ ವ್ಯವಸ್ಥೆ ತಂದೊಡ್ಡಿದೆ.

೧೯೬೦ರ ದಶಕದಲ್ಲಿ ಯೂರೋಪಿನಲ್ಲಿ ಸಿಮೋನ್‌ದ ಬೋವಾ ಮತ್ತು ಬೆಟ್ಟಿಫ್ರೀಡನ್ ಮುಂತಾದವರು ನಡೆಸಿದ ಅಂತಾರಾಷ್ಟ್ರೀಯ ಮಟ್ಟದ ಸ್ತ್ರೀವಾದಿ ಚಳುವಳಿಯ ಪ್ರಭಾವದಿಂದ ಮಹಿಳೆಯರಿಗೆ ಅನೇಕ ಹೊಸ ಹೊಸ ಕ್ಷೇತ್ರಗಳಲ್ಲಿ ಉದ್ಯೋಗ ಮಾಡುವುದಕ್ಕೆ ಅನುಕೂಲವಾಯಿತು. ಮಾನವ ಹಕ್ಕುಗಳ ಚಳುವಳಿಯಿಂದ, ೧೯೭೫ರ ಅಂತಾರಾಷ್ಟ್ರೀಯ ಮಹಿಳಾ ದಶಕಗಳ ನಂತರ ಮಹಿಳೆಯರು ಅಂಚೆ-ತಂತಿ ಕಛೇರಿಗಳಲ್ಲಿ ಸಾರ್ವಜನಿಕ ಸಂಪರ್ಕ, ಪತ್ರಿಕೋದ್ಯಮ, ನಾಗರೀಕ ವಿಮಾನಯಾನ ಇಂಜಿನಿಯರಿಂಗ್ ವಿಜ್ಞಾನ ವಲಯ, ಪೊಲೀಸ್ ಗೃಹರಕ್ಷಕ ಪಡೆ ಮುಂತಾದವುಗಳಲ್ಲದೆ, ಇತ್ತೀಚೆಗೆ ಕಂಡಕ್ಟರ್ ಮತ್ತು ಡ್ರೈವರ್‌ಗಳಂತಹ ವೃತ್ತಿಗಳಲ್ಲಿಯೂ ಮಹಿಳೆಯರು ಪುರುಷರಿಗೆ ಪೈಪೋಟಿ ನೀಡುತ್ತಿದ್ದಾರೆ. ಆದರೆ ಸಾಂಪ್ರದಾಯಿಕವಲ್ಲದ ಕ್ಷೇತ್ರಗಳಲ್ಲಿ ಪ್ರವೇಶಿಸುವ ಮಹಿಳೆ ಅನೇಕ ಅಡೆತಡೆಗಳನ್ನು ಈ ಸಮಾಜ ಅವಳ ಮೇಲೆ ಒಡ್ಡಿದೆ ಉದ್ಯೋಗ ಮಾಡುತ್ತಿರುವ ಪ್ರತಿಯೊಬ್ಬ ಮಹಿಳೆಗೆ ಒಂದಲ್ಲ ಒಂದು ರೀತಿಯಲ್ಲಿ ಸಮಸ್ಯೆಗಳನ್ನು ಈ ಸಮಾಜ ನೀಡುತ್ತಲೇ ಬರುತ್ತಿದೆ. ಅದರಲ್ಲಿ ಸಾಂಪ್ರದಾಯಿಕವಲ್ಲದ ಕ್ಷೇತ್ರವಾದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಹಿಳೆಯರ ಕೆಲಸ ಕಾರ್ಯ ಇನ್ನಿತರ ಉದ್ಯೋಗಗಳಿಗಿಂತ ಭಿನ್ನ ಸ್ವರೂಪದ್ದಾಗಿರವುದರಿಂದ ಇವರ ಸ್ಥಿತಿಗತಿ ಮತ್ತು ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡುವ ಅಗತ್ಯ. ಪ್ರಸ್ತುತ ಸಂಶೋಧನಾಸಂಪ್ರಬಂಧಕ್ಕಿದೆ. ಆದ್ದರಿಂದ ಈಶಾನ್ಯ ಕರ್ನಾಟಕ ರಾಜ್ಯರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳನ್ನು ಅಧ್ಯಯನಕ್ಕೆ ಈ ನಿಬಂಧವನ್ನು ಒಳಪಡಿಸಲಾಗಿದೆ.

## ೧.೧ ಅಧ್ಯಯನದ ಉದ್ದೇಶ :

ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಅನೇಕ ರಂಗಗಳಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ಉದ್ಯೋಗ ಮಾಡುವ ಎಲ್ಲಾ ಮಹಿಳೆಯರು ಒಂದಲ್ಲಾ ಒಂದು ರೀತಿಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಲೇ ಇದ್ದಾರೆ. ಉದ್ಯೋಗ ಮಾಡುತ್ತಿದ್ದರು ಅವಳು ಆರ್ಥಿಕವಾಗಿ ಸ್ವತಂತ್ರ್ಯಳಾಗಿಲ್ಲ. ಕುಟುಂಬದಲ್ಲಿ ನೆಮ್ಮದಿಯಿಂದ ಜೀವನ ಸಾಗಿಸಲಾಗುತ್ತಿಲ್ಲ. ಸಮಾಜದಿಂದ ಗಂಡ, ಅತ್ತೆ, ಮಾವ ಮಕ್ಕಳಿಂದ ನಿಂದನೆಗೆ ಒಳಗಾಗಿದ್ದಾಳೆ. ಕೆಲಸದ ಸ್ಥಳದಲ್ಲಿಯು ಮೇಲಾಧಿಕಾರಿಗಳ ಮತ್ತು ಸಹೋದ್ಯೋಗಿಗಳ ಸಹಕಾರ ಇಲ್ಲದೆ ಇರುವುದರಿಂದ ಔದ್ಯೋಗಿಕ ಕೆಲಸವನ್ನು ಸಹ ನೆಮ್ಮದಿಯಿಂದ ಮಾಡುವುದಕ್ಕೆ ಆಗದೇ ಅವಳು ಮಾನಸಿಕವಾಗಿ, ದೈಹಿಕವಾಗಿ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅದರಲ್ಲಿ ಸಾರ್ವಜನಿಕ ವಲಯಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ಕಂಡಕ್ಟರ್ ಕೆಲಸದ ಸ್ವರೂಪ ಭಿನ್ನವಾಗಿರುವುದರಿಂದ ಉಳಿದೆಲ್ಲಾ ಉದ್ಯೋಗಸ್ಥ ಮಹಿಳೆಯರಿಗಿಂತ ಹೆಚ್ಚಿನ ಪ್ರಮಾಣದ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬರುತ್ತಿದೆ. ಆದ್ದರಿಂದ ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಸಮಸ್ಯೆಗಳನ್ನು

ಅಧ್ಯಯನ ಮಾಡುವ ಅಗತ್ಯವಿದೆ. ನಮ್ಮ ಸಮಾಜ ವ್ಯವಸ್ಥೆ ರೂಢಿಗತ ಸಂಪ್ರದಾಯದಿಂದ ಕೂಡಿರುವುದರಿಂದ ಮಹಿಳೆಯರು ಸಾರ್ವಜನಿಕ ವಲಯವಾದಂತಹ ಕಂಡಕ್ಟರ್ ಉದ್ಯೋಗ ಮಾಡುವವರನ್ನು ಸಮಾಜದಲ್ಲಿ ನೋಡುವ ದೃಷ್ಟಿ ಅವರು ಕೌಟುಂಬಿಕವಾಗಿ ಮತ್ತು ವೈವಾಹಿಕವಾಗಿ ಎದುರಿಸುವಂತಹ ಸಮಸ್ಯೆಗಳು ಭೀಕರವಾಗಿವೆ, ಸರ್ಕಾರ ಇವರಿಗೆ ನೀಡಿದಂತಹ ಎಲ್ಲಾ ಸೌಲಭ್ಯಗಳು ಸಿಗುತ್ತಿಲ್ಲ. ಸಿಕ್ಕರೂ ಅವು ಅವರಿಗೆ ಅಷ್ಟೊಂದು ಉಪಯುಕ್ತವಾಗಿಲ್ಲ. ಈ ಸೌಲಭ್ಯಗಳು ಸಿಗುತ್ತಿಲ್ಲವಾದ್ದರಿಂದ ಮಹಿಳಾ ಕಂಡಕ್ಟರ್‌ಗಳು ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹೀಗಾಗಿ ಇವರ ಬಗೆಗಿನ ಸಮಸ್ಯೆಗಳು ಹಾಗೂ ಸ್ಥಿತಿಗತಿಗಳ ಒಟ್ಟು ಅಧ್ಯಯನದ ಮುಖ್ಯ ಆಶಯಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ವಿವರಿಸಲಾಗಿದೆ.

೧. ಈ ಪುರುಷಪ್ರಧಾನ ಸಮಾಜದಲ್ಲಿ ಲಿಂಗ ಪೂರ್ವಗ್ರಹಗಳು ಎಲ್ಲಾ ಕ್ಷೇತ್ರದಲ್ಲಿಯೂ ತನ್ನ ಪ್ರಭಾವ ಬೀರಿದೆ. ಅದೇ ರೀತಿ ನನ್ನ ಸಂಶೋಧನಾ ಅಧ್ಯಯನ ಸಾರ್ವಜನಿಕ ವಲಯವಾದ್ದರಿಂದ ಅವರ ಕೆಲಸದ ಸ್ವರೂಪವು ವಿಭಿನ್ನವಾಗಿರುವುದರಿಂದ ಮಹಿಳಾ ಕಂಡಕ್ಟರ್‌ಗಳ ಕೆಲಸ, ಸಮಸ್ಯೆಗಳತ್ತ ಅವರ ವೃತ್ತಿಯಲ್ಲಿನ ಲಿಂಗ ಪೂರ್ವಗ್ರಹಗಳನ್ನು ಪತ್ತೆ ಹಚ್ಚುತ್ತಾ ಅವರ ಸಮಸ್ಯೆಗಳನ್ನು ಅಧ್ಯಯನ ಮಾಡುವುದು. ನಮ್ಮ ಸಮಾಜ ಮಹಿಳೆಯರನ್ನು ಸಾರ್ವಜನಿಕರ ಮಧ್ಯೆ ಕೆಲಸ ಮಾಡುವುದನ್ನು ಒಪ್ಪಿಕೊಳ್ಳುವುದಿಲ್ಲ. ಮಹಿಳೆಯರು ಕೆಳದರ್ಜೆಯ ಕಡಿಮೆ ಸಂಭಾವನೆ ಇರುವ ಮತ್ತು ಸೇವಾ ವಲಯಗಳಂತಹ ಕೆಲಸಗಳಾದ ಶಿಕ್ಷಕಿ, ದಾದಿಯಂತಹ ಕೆಲಸಗಳನ್ನು ಮಾತ್ರ ಮಹಿಳೆಯರು ಮಾಡಲು ಸೂಕ್ತವಾದವರು. ಹೆಣ್ಣುಮಕ್ಕಳ ಮನಸ್ಸು ತುಂಬಾ ಚಂಚಲ ಎಂಬುದಾಗಿ ಪುರುಷಪ್ರಧಾನ ಸಮಾಜ ಹೇಳುತ್ತದೆ. ಮಹಿಳಾ ಕಂಡಕ್ಟರ್‌ಗಳ ಸಹೋದ್ಯೋಗಿಗಳು ಬರೀ ಪುರುಷರಾಗಿರುವುದರಿಂದ ಕತ್ತಲಾಗುವುದರ ಒಳಗೆ ಮರ್ಯಾದಸ್ಥ ಕುಟುಂಬದ ಹೆಣ್ಣುಮಕ್ಕಳ ಮನೆ ಸೇರಿಕೊಳ್ಳುವುದು ಈ ಕಂಡಕ್ಟರ್ ಕೆಲಸ ಮಹಿಳೆಯರ ಪಾಲಿಗೆ ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ. ಇಂತಹ ಕೆಲಸಗಳು ಮಹಿಳೆಯರು ಮಾಡುವಂತಹ ಕೆಲಸಗಳಲ್ಲ ಪುರುಷರು ಮಾತ್ರ ಮಾಡಬೇಕು. ಅವರು ಎಷ್ಟೊತ್ತಿಗಾದರೂ ಬರಲಿ ಅವರಿಂದ ಕುಟುಂಬದ ಮರ್ಯಾದೆಗೆ ದಕ್ಕೆಯಾಗುವುದಿಲ್ಲ. ಪುರುಷರು ದೈಹಿಕವಾಗಿ ಎಂತಹ ಪರಿಶ್ರಮವಿರುವ ಕೆಲಸವನ್ನು ಸಹ ಮಾಡಬಲ್ಲರು. ಆದರೆ, ಮಹಿಳೆಯರು ಮಾತ್ರ ಮೃದು ಸ್ವಭಾವದವರು. ಕೋಮಲರು ಆಗಿರುವುದರಿಂದ ಇಂತಹ ಕಂಡಕ್ಟರ್‌ಗಳಂತಹ ಕೆಲಸಗಳನ್ನು ಮಾಡಬಾರದೆಂಬ ನಿಷೇಧವನ್ನು ಈ ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಹೇರುತ್ತದೆಂದು ತೋರುತ್ತದೆ.

೨. ಪುರುಷಪ್ರಧಾನ ವ್ಯವಸ್ಥೆಯ ಕೌಟುಂಬಿಕ ಚೌಕಟ್ಟಿನಲ್ಲಿ ಬಂಧಿತರಾಗಿದ್ದ ಮಹಿಳೆಯರು ಇಂದು ಏಕೆ? ಕಂಡಕ್ಟರ್‌ಗಳಂತಹ ಸಾರ್ವಜನಿಕ ವಲಯದ ಉದ್ಯೋಗಕ್ಕೆ ತಮ್ಮ ಕ್ಷೇತ್ರವನ್ನು ವಿಸ್ತರಿಸಿಕೊಂಡರು ಎಂಬ ವಿಷಯದತ್ತ ಗಮನ ಹರಿಸುವುದು ಮುಖ್ಯವಾಗಿದೆ. ಇಷ್ಟು ವರ್ಷಗಳ ಕಾಲ ಹೆಣ್ಣು ಮಕ್ಕಳನ್ನು ಈ ಪುರುಷ ಪ್ರಧಾನ ಸಮಾಜ ಕುಟುಂಬದ ನಾಲ್ಕು ಗೋಡೆಗಳ

ಮಧ್ಯೆ ಇರುವುದನ್ನು ಮಾತ್ರ ಒಪ್ಪಿಕೊಳ್ಳುತ್ತಾ ಬಂದಿತ್ತು. ಹೆಣ್ಣು ಮಕ್ಕಳು ಕುಟುಂಬದ ಯಜಮಾನನಾದ ತಂದೆ-ಗಂಡ, ಅಣ್ಣನ ಆಶ್ರಯದಲ್ಲಿ ಇದ್ದರೆ ಸಾಕು. ಅದು ಬಿಟ್ಟು ಹೊರಗಡೆ ಹೋಗಿ ಹೆಣ್ಣು ಮಕ್ಕಳು ದುಡಿಯುವುದು ಮನೆತನಕ್ಕೆ ಅವಮಾನ ಎಂಬ ಮೌಲ್ಯವನ್ನು ಒಪ್ಪಿಕೊಳ್ಳಲಾಗಿದೆ. ಮಹಿಳೆಯರು ಮನೆಯಲ್ಲಿಯೇ ಇದ್ದು ಮಕ್ಕಳ ಮತ್ತು ಹಿರಿಯರ ಸೇವೆ ಮಾಡಿಕೊಳ್ಳುತ್ತಾ ಇರುವಂತೆ ಸನಾತನ ಶಾಸ್ತ್ರಾದಿಗಳು ಕಟ್ಟುಪ್ಪಣೆಗಳನ್ನು ಮಾಡಿವೆ. ಆದರೆ ಇತ್ತೀಚೆಗೆ ಈ ಸಮಾಜದಲ್ಲಿ ಕಂಡಕ್ಟರ್‌ಗಳಂತಹ ಸಾರ್ವಜನಿಕ ವಲಯಗಳಗೆ ತಮ್ಮ ಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾರೆ. ದಿನದ ಹೆಚ್ಚಿನ ಸಮಯ ಕೆಲಸ ಮಾಡಬೇಕಾಗಿದ್ದು ಜನರ ಜೊತೆ ಬೆರೆಯಬೇಕಾಗಿದ್ದುದು ಜನರ ಮಧ್ಯೆ ಓಡಾಡಿಕೊಂಡು ಮತ್ತು ದಿನಕ್ಕೆ ಸಾವಿರಾರು ಜನರ ಜೊತೆ ಹೆಣಗಾಡಬೇಕಾಗಿರುವ ಇಂತ ಕೆಲಸಕ್ಕೆ ಬರಲು ಕಾರಣವೇನು? ಹೆಣ್ಣುಮಕ್ಕಳು ಕುಟುಂಬದಲ್ಲಿ ಇದ್ದರೇನೆ ಸುರಕ್ಷಿತವಾಗಿರುತ್ತಾರೆ ಎಂಬ ನಂಬಿಕೆ ಇರುವ ಈ ಪುರುಷಪ್ರಧಾನ ಸಮಾಜದಲ್ಲಿ ಅವಳಿಗೆ ಮನೆಯಲ್ಲಿ ಎಲ್ಲಾ ತರಹದ ಸೌಲಭ್ಯಗಳು ಇದ್ದರೆ ಅವಳು ಇಂತಹ ಕೆಲಸಕೆ ಬರುತ್ತಿರಲಿಲ್ಲ. ಪುರುಷರ ಸೋಮಾರಿತನ, ಕುಡುಕ ಗಂಡನನ್ನು ಕಟ್ಟಿಕೊಂಡ ತಪ್ಪಿಗಾಗಿಯೇ ಮನೆಯ ನಿರ್ವಹಣೆಯನ್ನು ಮಹಿಳೆ ಹೊರಬೇಕಾದ ಪರಿಸ್ಥಿತಿ ಉಂಟಾಗುತ್ತಿರುವುದು. ಮನೆಯಲ್ಲಿ ಯಾರಾದರೂ ಒಬ್ಬರು ಉದ್ಯೋಗಕ್ಕೆ ಹೋಗಲೇಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತಿರುವ ಆಧುನಿಕತೆಯ ವಾಸ್ತವಗಳು ಹಾಗೂ ಬೆಲೆ ಏರಿಕೆ, ಸಾರಿಗೆ ವೆಚ್ಚ, ಶಿಕ್ಷಣ ಮುಂತಾದ ಮೂಲಭೂತ ಸೌಲಭ್ಯಗಳ ಅಗತ್ಯಕ್ಕಾಗಿ ಮಹಿಳೆ ಸಾರ್ವಜನಿಕ ಉದ್ಯೋಗಕ್ಕಾಗಿ ತನ್ನನ್ನು ಒಡ್ಡಿಕೊಳ್ಳಬೇಕಾಗಿದೆ. ಒಬ್ಬರ ದುಡಿಮೆ ಸಾಕಾಗದ ಕಾರಣ ತಂದೆ, ಗಂಡನನ್ನು ಕಳೆದುಕೊಂಡು ತಬ್ಬಲಿಯಾದ ಹೆಣ್ಣು ಮಕ್ಕಳಿಗೆ ಈ ಬಗೆಯ ಉದ್ಯೋಗವೇ ಬಾಳ ಬುತ್ತಿಯಾಗಿದೆ. ಇಂತಹ ಅನಿವಾರ್ಯತೆಗಳ ಹಿಂದಿನ ಸಾಮಾಜಿಕ ಕಾರಣಗಳನ್ನು ಅಧ್ಯಯನ ಮಾಡುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

೩. ಕಂಡಕ್ಟರ್ ಉದ್ಯೋಗ ಮಾಡುವುದರಿಂದ ಅವರ ವೈವಾಹಿಕ ಜೀವನದ ಯಾವ ರೀತಿಯ ತೊಂದರೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ಗ್ರಹಿಸುವ ಉದ್ದೇಶದಿಂದ ವಿವಾಹ ಹೆಣ್ಣು ಮಕ್ಕಳಿಗೆ ಅನಿವಾರ್ಯವಾಗಿರುವ ಈ ಪುರುಷ ಪ್ರಧಾನ ಸಮಾಜ ಹೇಳುತ್ತದೆ. ಹೆಣ್ಣಿನ ಜೀವನದ ಮುಖ್ಯ ಗುರಿ ವಿವಾಹ. ಗಂಡನಾದವನು ಕುಡುಕನಾಗಿರಲಿ, ಸೋಮಾರಿಯಾಗರಲಿ, ನಿರುದ್ಯೋಗಿಯೇ ಆಗಿರಲಿ ಅವನನ್ನ ತಿರಸ್ಕರಿಸುವ ಹಾಗಿಲ್ಲ. ಅವನು ದುಡಿಯದಿದ್ದರೆ ಏನಾಯಿತು ಇವಳೆ ದುಡಿದು ಸಂಸಾರ ಸಾಗಿಸಬೇಕು. ಅವನು ಹೇಳಿದ ಹಾಗೇ ಕೇಳಬೇಕು. ಸಂಬಳವನ್ನೆಲ್ಲ ಅವನ ಕೈಯಲ್ಲಿ ಕೊಡಬೇಕು. ಎಂತಹ ದೊಡ್ಡ ಉದ್ಯೋಗದಲ್ಲಿ ಇದ್ದರೂ ಮನೆಗೆ ಬಂದಾಗ ಅವನ ಹಿಡಿತದಲ್ಲಿ ಇರಬೇಕು. ಅವಳು ಕೆಲಸ ಮಾಡಿ ಎಷ್ಟೇ ಸುಸ್ತಾಗಿ ಬಂದರೂ ಗಂಡನಾದವನು ಇಷ್ಟಪಟ್ಟಾಗ

ಅವನಿಗೆ ಲೈಂಗಿಕವಾಗಿ ತೃಪ್ತಿಪಡಿಸುವುದು ಹೆಂಡತಿಯ ಕರ್ತವ್ಯ. ಈ ಪುರುಷಪ್ರಧಾನ ಸಮಾಜ ಮೌಲ್ಯಗಳನ್ನು ಹೆಣ್ಣು ಮಕ್ಕಳ ಮೇಲೆ ಹೇರಿರುವುದರಿಂದ ಅವರು ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇನ್ನು ಅವಿವಾಹಿತ ಮಹಿಳೆಯರ ಪಾಡಂತೂ ಹೇಳತೀರದು.

ಉದ್ಯೋಗ ಸಾರ್ವಜನಿಕ ವಲಯವಾಗಿರುವುದರಿಂದ ಇಲ್ಲಿ ಜನರ ಜೊತೆ ಮಾತನಾಡಬೇಕಾಗುತ್ತದೆ. ಸಹೋದ್ಯೋಗಿಗಳು ಪುರುಷರಾಗಿರುವುದರಿಂದ ಇವರ ಜೊತೆ ದಿನದ ಹೆಚ್ಚಿನ ಸಮಯ ಕೆಲಸ ಮಾಡಬೇಕಾಗಿರುತ್ತದೆ. ಆದರೆ ಇದು ಸಾಂಪ್ರದಾಯಿಕ ಸಮಾಜವಾಗಿರುವುದರಿಂದ ಹೆಣ್ಣು ಮಕ್ಕಳನ್ನು ಸಾರ್ವಜನಿಕ ವಲಯದಲ್ಲಿ ಕೆಲಸ ಮಾಡುವುದನ್ನು ಒಪ್ಪಿಕೊಳ್ಳುವುದಿಲ್ಲ. ಹೆಣ್ಣುಮಕ್ಕಳು ಪರಪುರುಷರನ್ನು ಮಾತನಾಡಿಸಬಾರದು ಮತ್ತು ಕತ್ತಲಾಗುವುದರೊಳಗೆ ಮನೆ ಸೇರಿಕೊಳ್ಳುವುದು ಸಾಂಪ್ರದಾಯಿಕ ಕುಟುಂಬದ ಹೆಣ್ಣುಮಕ್ಕಳ ಲಕ್ಷಣ ಎಂದು ಹೇಳುತ್ತದೆ. ಆದರೆ ಈ ಕೆಲಸ ಬೆಳಿಗ್ಗೆ ಕೆಲಸಕ್ಕೆ ಹೋದರೆ ರಾತ್ರಿ ಮನೆಗೆ ಬರುವುದು ಎಷ್ಟೊತ್ತು ಆಗುತ್ತೋ ಗೊತ್ತಿಲ್ಲ. ದಿನದಲ್ಲಿ ಹೆಚ್ಚಿನ ಸಮಯ ಕೆಲಸದಲ್ಲಿಯೇ ಇರಬೇಕಾಗಿರುತ್ತದೆ. ಮನೆಯಲ್ಲಿರುವ ಹಿರಿಯರನ್ನು ಮಕ್ಕಳನ್ನು ಗಂಡನ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಹೆಂಡತಿಯಾದವಳ ಕರ್ತವ್ಯವಾಗಿದೆ ಎಂದು ಈ ಪುರುಷಪ್ರಧಾನ ಸಮಾಜದ ನಂಬಿಕೆಯಾಗಿರುವುದರಿಂದ ಮಾನಸಿಕವಾಗಿ ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಮೇಲಾಧಿಕಾರಿಗಳ ಒತ್ತಡದಿಂದ ಮತ್ತು ಸಹೋದ್ಯೋಗಿಗಳ ವರ್ತನೆಯಿಂದ ಮಾನಸಿಕವಾಗಿ ವೇದನೆಗಳಿಗೆ ಒಳಗಾಗಿದ್ದಾರೆಯೇ? ದಿನದಲ್ಲಿ ೧೩-೧೪ ತಾಸು ಕೆಲಸದಲ್ಲಿಯೇ ಉಳಿಯುವುದರಿಂದ ಗಂಡನಿಂದ ಅತ್ತೆ, ಮಾವ, ಮಕ್ಕಳಿಂದ ನಿಂದನೆಗೆ ಒಳಗಾಗುವುದರಿಂದ ಮಾನಸಿಕವಾಗಿ ತುಮುಲಗಳಿಗೆ ಒಳಗಾಗಿದ್ದಾಳೆ ಎಂಬ ಉದ್ದೇಶದಿಂದ ಅಧ್ಯಯನ ಕೈಗೊಳ್ಳಲಾಗಿದೆ.

೪. ಮಹಿಳೆಯರು ಕಂಡಕ್ಟರ್ ಉದ್ಯೋಗ ಮಾಡುವುದರಿಂದ ಆರೋಗ್ಯದಲ್ಲಿ ಯಾವ ರೀತಿಯ ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಏಕೆಂದರೆ ಈ ಉದ್ಯೋಗದ ಸ್ವರೂಪ ಬೇರೆ ರೀತಿಯಾಗಿರುವುದರಿಂದ ದಿನದಲ್ಲಿ ಹೆಚ್ಚಿನ ಸಮಯ ನಿಂತುಕೊಂಡೆ ಕೆಲಸ ಮಾಡಬೇಕಾಗಿದೆ. ಧೂಳು ಇರುವ ಕಡೆ ಡ್ಯೂಟಿಗೆ ಹಾಕಿದಾಗ ಶುದ್ಧವಾದ ಕುಡಿಯುವ ನೀರಿನ ಸೌಲಭ್ಯ ಇಲ್ಲದ್ದರಿಂದ ಅನಾರೋಗ್ಯಕ್ಕೆ ಒಳಗಾಗಿದ್ದಾರೆ. ಕೆಲಸದ ಒತ್ತಡದಲ್ಲಿ ಮುಟ್ಟಿನಲ್ಲಿ ಏರುಪೇರಾಗುವುದು, ಮತ್ತು ಗರ್ಭಿಣಿಯಾದಾಗ ವಿಶ್ರಾಂತಿ ಕೊಡದೆ ಇರುವುದರಿಂದ ಯಾವ ರೀತಿಯ ತೊಂದರೆ ಅನುಭವಿಸುತ್ತಿದ್ದಾರೆ. ಹೆರಿಗೆಯಾದಾಗ ರಜೆ ೩ ತಿಂಗಳು ಮಾತ್ರ ರಜೆ ಕೊಡುತ್ತಾರೆ. ಬಾಣಂತಿತನದ ಸಂದರ್ಭದಲ್ಲಿ ಹೆಚ್ಚಿನ ವಿಶ್ರಾಂತಿ ಬೇಕಾಗುತ್ತದೆ. ಈ ವಿಶ್ರಾಂತಿ ಇಲ್ಲದಕ್ಕಾಗಿ ಆರೋಗ್ಯದಲ್ಲಿ ಯಾವ ರೀತಿಯ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸುವುದು

೫. ಕೆಲಸದ ಸ್ಥಳದಲ್ಲಿ ಮಹಿಳಾ ಕಂಡಕ್ಟರ್‌ಗಳ ಮೂಲಭೂತ ಸೌಲಭ್ಯಗಳಾದ, ಶಿಶುಪಾಲನಾ ಕೇಂದ್ರ, ಪ್ರತ್ಯೇಕ ವಿಶ್ರಾಂತಿ ಸ್ಥಳ, ಶೌಚಾಲಯದ ವ್ಯವಸ್ಥೆ, ಶುದ್ಧವಾದ ಕುಡಿಯುವ ನೀರಿನ ವ್ಯವಸ್ಥೆ, ವಸತಿಗೃಹಗಳ ವ್ಯವಸ್ಥೆ ಇಲ್ಲ. ಸರ್ಕಾರ ಈ ಸಂಸ್ಥೆಯಲ್ಲಿ ಕೆಲಸ ಮಾಡುವ ಮಹಿಳೆಯರಿಗ ಒದಗಿಸಿಕೊಟ್ಟಿರುವ ಸೌಲಭ್ಯಗಳಾದ, ಹೆರಿಗೆ ರಜೆ, ವೇತನ, ಬಡ್ತಿ ಮುಂತಾದ ಸೌಲಭ್ಯಗಳು ಅವರಿಗೆ ತೃಪ್ತಿಯನ್ನುಕೊಟ್ಟಿದೆಯೇ ಎಂಬುದನ್ನು ತಿಳಿಸುವ ಅಗತ್ಯವಿದೆ. ತೃಪ್ತಿಯನ್ನು ಕೊಟ್ಟಿಲ್ಲ ಅಂದರೆ ಸರ್ಕಾರ ಇನ್ನೂ ಯಾವ ರೀತಿಯ ಕಾಯ್ದೆ, ಕಾನೂನು ತರಬೇಕು ಎಂಬುದನ್ನು ತಿಳಿಸಲು ಪ್ರಯತ್ನಿಸಲಾಗಿದೆ.

೬. ಕೆಲಸದ ಸ್ಥಳದಲ್ಲಿ ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳುವುದು, ಶಿಕ್ಷಕಿ, ನರ್ಸ್, ಕ್ಲರ್ಕ್ ಉದ್ಯೋಗದಲ್ಲಿರುವ ಮಹಿಳೆಯರು ೪ ಗೋಡೆಗಳ ಮಧ್ಯೆ ೧೦-೨೦ ಪುರುಷರ ಜೊತೆ ಕೆಲಸ ಮಾಡುವ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿರುವಾಗ ದಿನದಲ್ಲಿ ಸಾವಿರಾರು ಜನರ ಮಧ್ಯೆ ಕೆಲಸ ಮಾಡುವ ಮಹಿಳಾ ಕಂಡಕ್ಟರ್‌ಗಳು ದಿನದ ಹೆಚ್ಚಿನ ಸಮಯ ಕೆಲಸದಲ್ಲಿ ನಿರತರಾಗಿರುವುದರಿಂದ ಇವರಿಗೆ ಉಂಟಾಗುವ ಲೈಂಗಿಕ ಕಿರುಕುಳದ ವ್ಯಾಪ್ತಿ ವಿಸ್ತಾರವಾಗಿದೆ. ಪ್ರಯಾಣಿಕರಿಂದ, ಮೇಲಾಧಿಕಾರಿಗಳಿಂದ, ಸಹೋದ್ಯೋಗಿಗಳಿಂದ ಲೈಂಗಿಕ ಕಿರುಕುಳಕ್ಕೆ ಇವರು ಒಳಗಾಗಿದ್ದಾರೆಯೇ ಒಳಗಾಗಿದ್ದರೆ ಅದರ ಸ್ವರೂಪಗಳೇನು ಅವರು ದೈಹಿಕವಾಗಿ ಲೈಂಗಿಕ ಕಿರುಕುಳಕ್ಕೆ ಒಳಗಾಗಿದ್ದಾರೋ ಅಥವಾ ಇನ್ನಿತರ ಯಾವ ತರಹದ ಸಾಮಾನ್ಯ ಕಿರುಕುಳಗಳನ್ನು ಕೆಲಸದ ಸ್ಥಳದಲ್ಲಿ ಅನುಭವಿಸುತ್ತಿದ್ದಾರೆ ಎಂಬುದನ್ನು ಅಧ್ಯಯನ ಮಾಡುವ ಉದ್ದೇಶ ಈ ಸಂಪ್ರಬಂಧಕ್ಕಿದೆ.

೭. ಈ ಕಂಡಕ್ಟರ್ ಉದ್ಯೋಗ ಮಾಡುವುದರಿಂದ ಮಾನಸಿಕವಾಗಿ ಯಾವ ರೀತಿಯ ಸಮಸ್ಯೆಗಳನ್ನು ಎದುಸುತ್ತಿದ್ದಾರೆ. ಕಂಡಕ್ಟರ್ ಉದ್ಯೋಗವೇ ಸಾರ್ವಜನಿಕ ವಲಯವಾದ್ದರಿಂದ ದಿನಕ್ಕೆ ಸಾವಿರಾರು ಜನರಿಗೆ ಹೊಂದಿಕೊಂಡು ತಾಳ್ಮೆಯಿಂದ ಕೆಲಸ ಮಾಡಬೇಕಾಗುತ್ತದೆ. ಆದರೆ ಎಲ್ಲಾ ಜನರ ಮನಸ್ಥಿತಿ ಒಂದೇ ತೆರನಾಗಿರುವುದಿಲ್ಲ. ಒಬ್ಬೊಬ್ಬ ಜನರ ಮನಸ್ಥಿತಿ ಒಂದೊಂದು ರೀತಿಯಾಗಿರುತ್ತದೆ. ಅವರನ್ನು ಸುಧಾರಿಸಿಕೊಂಡು ಕೆಲಸ ಮಾಡಬೇಕಾಗುತ್ತದೆ. ಪ್ರಯಾಣಿಕರು ಮಹಿಳಾ ಕಂಡಕ್ಟರ್‌ಗಳ ಜೊತೆ ಯಾವ ರೀತಿಯಲ್ಲಿ ವರ್ತಿಸುತ್ತಾರೆ.

೮. ಮಹಿಳಾ ಕಂಡಕ್ಟರ್‌ಗಳು ಬಿಡುವಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇವರಿಗೆ ಬಿಡುವು ಇಲ್ಲದ ಕಾರಣದಿಂದ ಅವರು ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವುದಕ್ಕೆ ಆಗುತ್ತಿಲ್ಲ ಎಂಬ ಈ ಉದ್ದೇಶಗಳ ಕುರಿತು ಯಾವುದೇ ಸಂಶೋಧನಾ ಅಧ್ಯಯನಗಳು ನಡೆದಿರುವುದಿಲ್ಲ. ಆದರೆ ದಿನಪತ್ರಿಕೆಗಳಾದ ವಿಜಯ ಕರ್ನಾಟಕ, ಪ್ರಜಾವಾಣಿಗಳಲ್ಲಿ ತಿಂಗಳ ಪತ್ರಿಕೆಯಾದ ಸುಧಾವಲ್ಲಿ ಬಿಡಿ ಲೇಖನಗಳು ಮಾತ್ರ ಪ್ರಕಟಣೆಯಾಗಿವೆ. ಶಿಕ್ಷಕಿ, ದಾದಿ, ಮುಂತಾದ ಕ್ಷೇತ್ರಗಳಲ್ಲಿ ಉದ್ಯೋಗ ಮಾಡುವ

ಮಹಿಳೆಯರು ಸಹ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆದರೆ ಸಾರ್ವಜನಿಕ ವಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರ ಸಮಸ್ಯೆಗಳಿಗೂ ೪ ಗೋಡೆಗಳ ಮಧ್ಯೆ ಕೆಲಸ ಮಾಡುವ ಮಹಿಳೆಯರ ಸಮಸ್ಯೆಗಳಿಗೂ ವ್ಯತ್ಯಾಸವಿದೆ ಎಂಬ ಉದ್ದೇಶದಿಂದ ಸಾರ್ವಜನಿಕ ವಲಯವಾದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳಿಗೆ ಇರುವಂತಹ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗಮನಿಸಿ ವಾಸ್ತವಾಂಶಗಳನ್ನು ಗಮನದಲ್ಲಿಟ್ಟುಕೊಂಡು ಸಂಶೋಧನಾ ಅಧ್ಯಯನ ಮಾಡಲಾಗುವುದು.

## ೧.೨ ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಸಂಶೋಧನಾ ಸಂಪ್ರಬಂಧದಲ್ಲಿ ಹೈದ್ರಾಬಾದ್ ಕರ್ನಾಟಕದ ಈಶಾನ್ಯ ಕರ್ನಾಟಕ ರಾಜ್ಯ ರಸ್ತೆ ಸಂಸ್ಥೆಯ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ೫ ಘಟಕಗಳಿವೆ. ಆದರೆ ನಾನು ನನ್ನ ಅಧ್ಯಯನಕ್ಕಾಗಿ ೨ ತಾಲೂಕ ಘಟಕದ ಡಿಪೋದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಹಿಳಾ ಕಂಡಕ್ಟರ್‌ಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ ಡಿಪೋಗಳಲ್ಲಿ ಕೆಲಸ ಮಾಡುವ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಬಳ್ಳಾರಿ ಜಿಲ್ಲೆಯ ೫ ಘಟಕಗಳಲ್ಲಿ ೮೦ ಮಹಿಳಾ ಕಂಡಕ್ಟರ್‌ಗಳು ಕಾರ್ಯ ನಿರ್ವಹಿಸುತ್ತಿದ್ದಾರೆ. ಆದರೆ ಮುಖ್ಯವಾಗಿ ೨ ಘಟಕ ಕೂಡ್ಲಿಗಿ ಮತ್ತು ಹೊಸಪೇಟೆ ಕಾರ್ಯ ನಿರ್ವಹಿಸುವ ೩೦ ಮಹಿಳೆಯರನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕೂಡ್ಲಿಗಿ ತಾಲೂಕು ನನ್ನ ವಾಸಸ್ಥಳವಾದ್ದರಿಂದ ಹೊಸಪೇಟೆ ನಾನು ಹೆಚ್ಚಾಗಿ ಬರುವುದರಿಂದ ಕ್ಷೇತ್ರ ಕಾರ್ಯ ಮಾಡಲು ಅನುಕೂಲವಾಗುತ್ತದೆ ಎಂಬ ಉದ್ದೇಶದಿಂದ ಪ್ರಸ್ತುತ ಸಂಶೋಧನಾ ಅಧ್ಯಯನಕ್ಕಾಗಿ ಲಭ್ಯವಾಗಿರುವ ಮಾಹಿತಿಯನ್ನು ಮೂಲತಃ ಲಭ್ಯವಿರುವ ಕಾಲಮಿತಿ, ಕಾಲಘಟ್ಟಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕ್ಷೇತ್ರಕಾರ್ಯದ ಮೂಲಕ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳನ್ನು ಅಧ್ಯಯನ ಮಾಡಲು ಯೋಜಿಸಲಾಗಿದೆ.

ಇವರು ಈ ಕೆಲಸ ಮಾಡುವುದರಿಂದ ಕೌಟುಂಬಿಕವಾಗಿ ಮತ್ತು ವೈವಾಹಿಕವಾಗಿ, ಆರೋಗ್ಯಕವಾಗಿ, ಮಾನಸಿಕವಾಗಿ ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕೆಲಸದ ಸ್ಥಳದಲ್ಲಿ ಮೇಲಾಧಿಕಾರಿಗಳಿಂದ, ಸಹೋದ್ಯೋಗಿಗಳಿಂದ ಪ್ರಯಾಣಿಕರಿಂದ ಯಾವ ರೀತಿಯ ಕಿರುಕುಳಗಳನ್ನು ಎದುರಿಸುತ್ತಿದ್ದಾರೆ. ಕೆಲಸದ ಸ್ಥಳದಲ್ಲಿ ಅವರಿಗೆ ಯಾವ ರೀತಿಯ ಸೌಲಭ್ಯಗಳನ್ನು ನೀಡಿದರೆ ಅವರು ಇನ್ನು ಉತ್ತಮ ರೀತಿಯಲ್ಲಿ ಕೆಲಸ ಮಾಡಿಕೊಂಡು ಹೋಗುತ್ತಾರೆ. ಕೆಲಸದ ಸ್ಥಳದಲ್ಲಿ ಮೇಲಾಧಿಕಾರಿಗಳ ಮತ್ತು ಸಹೋದ್ಯೋಗಿಗಳ, ಪ್ರಯಾಣಿಕರ ಸಹಕಾರ ಎಷ್ಟು ಅಗತ್ಯವಾಗಿದೆ ಎಂಬುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ.

## ೧.೩ ಅಧ್ಯಯನದ ದೃಷ್ಟಿಕೋನ ಮತ್ತು ವೈಧಾನಿಕತೆ :

ಪ್ರಸ್ತುತ ಅಧ್ಯಯನವನ್ನು ಕ್ಷೇತ್ರಕಾರ್ಯದ ಮೂಲಕ ಸ್ತ್ರೀವಾದಿ ದೃಷ್ಟಿಕೋನ ಮತ್ತು ಮಹಿಳಾ ಅಧ್ಯಯನದ ಸೈದ್ಧಾಂತಿಕತೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಮಹಿಳಾ ಕಂಡಕ್ಟರ್‌ಗಳ ಸ್ಥಿತಿ

ಮತ್ತು ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಇಲ್ಲಿ ಹಲವು ವಿಧಾನಗಳನ್ನು ಅನುಸರಿಸಲಾಗಿದೆ. ಅದರಲ್ಲಿ ಮುಖ್ಯವಾಗಿ ಸಂದರ್ಶನ, ಪ್ರಶ್ನಾವಳಿ ಮೂಲಕ ಈ ಅಧ್ಯಯನವನ್ನು ನಡೆಸಲಾಗುವುದು. ಪ್ರಶ್ನಾವಳಿಯಲ್ಲಿ ರಚಿತ, ಅರಚಿತ ಪ್ರಶ್ನಾವಳಿಯ ಬಳಕೆ, ವ್ಯಕ್ತಿನಿಷ್ಠತೆ, ಅವಲೋಕನ ವಿಧಾನ, ಗುಣಾತ್ಮಕ ವಿಧಾನಗಳಿಂದ ಪ್ರಸ್ತುತ ಅಧ್ಯಯನವನ್ನು ಮಾಡಲಾಗುವುದು.

**ಸೈದ್ಧಾಂತಿಕತೆ :**

ಪ್ರಸ್ತುತ ಅಧ್ಯಯನವನ್ನು ಸ್ತ್ರೀವಾದಿ ದೃಷ್ಟಿಕೋನ ಮತ್ತು ಮಹಿಳಾ ಅಧ್ಯಯನದ ದೃಷ್ಟಿಕೋನದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುವುದು. ಈ ಪುರುಷಪ್ರಧಾನ ಸಮಾಜದಲ್ಲಿ ಸಾರ್ವಜನಿಕ ವಲಯದಲ್ಲಿ ಮಹಿಳೆಯರು ಕೆಲಸ ಮಾಡುವಾಗ ಯಾವ ಯಾವ ರೀತಿಯ ಸಮಸ್ಯೆಗಳನ್ನು ತಂದೊಡ್ಡುತ್ತದೆ ಎಂಬುದನ್ನು ಸ್ತ್ರೀವಾದಿ ತಾತ್ವಿಕ ನೆಲೆಗಳಾದ ಉದಾರವಾದಿ ಸ್ತ್ರೀವಾದ, ತೀವ್ರಗಾಮಿ, ಸಮಾಜವಾದಿ ಸ್ತ್ರೀವಾದ, ಮನೋವಿಶ್ಲೇಷಣಾತ್ಮಕ ಸ್ತ್ರೀವಾದದ ಹಿನ್ನೆಲೆಯಲ್ಲಿ ಮತ್ತು ಮಹಿಳಾ ಅಧ್ಯಯನದ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳನ್ನು ಗುರುತಿಸಿ ಅವರಿಗೆ ಪರಿಹಾರಗಳನ್ನು ಶೋಧಿಸುವ ಚಿಂತನೆಯನ್ನು ಈ ಅಧ್ಯಯನದಲ್ಲಿ ಮಾಡಲಾಗುವುದು.

**ಕ್ಷೇತ್ರಕಾರ್ಯ :**

ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯವನ್ನು ಮೂಲ ಆಧಾರವಾಗಿಟ್ಟುಕೊಳ್ಳಲಾಗಿದೆ. ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಮತ್ತು ಸಮಸ್ಯೆಗಳು ಎಂಬ ವಿಷಯಕ್ಕೆ ಸಂಬಂಧಿ ಹೆಚ್ಚಿನ ಮಾಹಿತಿ ಇಲ್ಲದ ಕಾರಣ ಹೆಚ್ಚಾಗಿ ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ರಚಿತ ಮತ್ತು ಅರಚಿತ ಪ್ರಶ್ನಾವಳಿಯ ಮತ್ತು ಸಂದರ್ಶನ ವಿಧಾನದ ಮೂಲಕ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗುವುದು.

**ಸಂದರ್ಶನ ವಿಧಾನ :**

ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಮತ್ತು ಸಮಸ್ಯೆಗಳ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂದರ್ಶನದ ಮೂಲಕ ಪಡೆದುಕೊಳ್ಳಲಾಗುವುದು.ಮಹಿಳಾ ಕಂಡಕ್ಟರ್‌ಗಳಿಗೆ ತತ್‌ಕ್ಷಣವಾಗಿ ಮನೆಗಳಿಗೆ ಹೋಗಿ ಮತ್ತು ಮೊದಲೇ ಪೂರ್ವಯೋಜಿತವಾಗಿ ಸಂದರ್ಶನ ಮಾಡುವುದಕ್ಕೆ ಬರುತ್ತೇನೆ ಎಂದು ತಿಳಿಸಿ ಮನೆಗಳಿಗೆ ಹೋಗಿ ಸಂದರ್ಶನ ನಡೆಸಲು ಉದ್ದೇಶಿಸಿದೆ. ಅವರು ಡ್ಯೂಟಿ ಮುಗಿಸಿಕೊಂಡು ರಾತ್ರಿ ಮನೆಗೆ ಬಂದಾಗ ಅವರ ಮನೆಯಲ್ಲಿ ಇದ್ದುಕೊಂಡು ಸಂದರ್ಶನ ಮಾಡಿ ಅವರ ಸ್ಥಿತಿಗತಿ ಹಾಗೂ ಸಮಸ್ಯೆಗಳನ್ನು ತಿಳಿದುಕೊಳ್ಳಲಾಗುವುದು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳನ್ನು ಬಸ್‌ನಲ್ಲಿ ಮತ್ತು ಡಿಪೋಗಳಲ್ಲಿ ಭೇಟಿ ಮಾಡಿ ಅವರ ಸಮಸ್ಯೆಗಳ ಮಾಹಿತಿಯನ್ನು ಪಡೆದುಕೊಳ್ಳಲಾಗುವುದು. ಡಿಪೋಗಳಿಗೆ ಹೋಗಿ ಮ್ಯಾನೇಜರ್, ಕಂಟ್ರೋಲರನ್ನು ಭೇಟಿ ಮಾಡಿ ಮಹಿಳಾ ಕಂಡಕ್ಟರ್‌ಗಳು ಈ ಕೆಲಸ ಮಾಡುವುದರ

ಬಗ್ಗೆ ಅವರ ಅಭಿಪ್ರಾಯವೇನು? ಅವರು ಯಾವ ರೀತಿಯಲ್ಲಿ ಕೆಲಸ ಮಾಡುತ್ತಿದ್ದಾರೆ ಎಂಬುದರ ಬಗ್ಗೆ ಮಾಹಿತಿ ಪಡೆದುಕೊಳ್ಳಲಾಗಿದೆ. ಬಸ್‌ನಲ್ಲಿ ಪ್ರಯಾಣಿಕರನ್ನು ಸಂದರ್ಶನ ಮಾಡಿ ಮಹಿಳೆಯರು ಕಂಡಕ್ಟರ್ ಕೆಲಸ ಮಾಡುವುದರ ಬಗ್ಗೆ ಅವರ ಅಭಿಪ್ರಾಯವನ್ನು ಪಡೆದುಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗುವುದು.

**ಪ್ರಶ್ನಾವಳಿ :**

ಪ್ರಸ್ತುತ ಅಧ್ಯಯನವನ್ನು ರಚಿತ ಮತ್ತು ಅರಚಿತ ಪ್ರಶ್ನಾವಳಿಯ ಮೂಲಕ ಮಹಿಳಾ ಕಂಡಕ್ಟರ್‌ಗಳನ್ನು ಮತ್ತು ಡಿಪೋಗಳ ಮೇಲಾಧಿಕಾರಿಗಳನ್ನು ಮತ್ತು ಸಹೋದ್ಯೋಗಿಗಳನ್ನು, ಪ್ರಯಾಣಿಕರನ್ನು ರಚಿತ ಮತ್ತು ಅರಚಿತ ಪ್ರಶ್ನೆಯನ್ನು ಕೇಳುವುದರ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗುವುದು.

ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು ಒಂದೇ ರೀತಿ ಆಗಿರದೆ ವಿಭಿನ್ನ ರೀತಿಯಾಗಿರುವ ಮಹಿಳೆಯ ಸಮಸ್ಯೆಯನ್ನು ಆಳವಾಗಿ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗುವುದು. ನಿರ್ಧಿಷ್ಟವಾಗಿ ಮಹಿಳಾ ಕಂಡಕ್ಟರ್‌ಗಳಲ್ಲಿ ಕೆಲವೊಂದು ಪ್ರಕರಣಗಳು ಸಂಭವಿಸಿರುವುದನ್ನು ಗುರುತಿಸಿ, ಆ ಪ್ರಕರಣಗಳನ್ನು ವಿಶೇಷವಾಗಿ ಅಧ್ಯಯನ ಮಾಡಲಾಗುವುದು.

**ಅವಲೋಕನ ವಿಧಾನ :**

ಮಹಿಳಾ ಕಂಡಕ್ಟರ್‌ಗಳಿಗು ಬಸ್‌ಗಳಿಗೆ ಬಸ್ ಯಾವ ಊರಿಗೆ ಹೋಗುತ್ತೋ ಆ ಊರಿಗೆ ಆ ಬಸ್‌ನಲ್ಲಿ ಹೋಗಿ ಮತ್ತು ಬಸ್‌ಸ್ಟ್ಯಾಂಡ್‌ನಲ್ಲಿ ಕೂತು ಪ್ರಯಾಣಿಕರು ಮತ್ತು ಸಹೋದ್ಯೋಗಿಗಳು ಅವರನ್ನು ನೋಡುವ ದೃಷ್ಟಿಯ ಬಗ್ಗೆ ಮತ್ತು ಅವರ ಬಗ್ಗೆ ಪ್ರಯಾಣಿಕರು ಏನು ಮಾತನಾಡಿಕೊಳ್ಳುತ್ತಾರೆ ಎಂಬುದನ್ನು ಅವಲೋಕನ ಮಾಡುವುದರ ಮೂಲಕ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗುವುದು.

**ವ್ಯಕ್ತಿನಿಷ್ಟತೆ :**

ನಾನು ಕೂಡ ಒಬ್ಬ ಮಹಿಳೆಯಾಗಿರುವುದರಿಂದ ಬಸ್‌ನಲ್ಲಿ ಪ್ರಯಾಣ ಮಾಡುವಾಗ ಪುರುಷರಿಂದ ಯಾವ ಯಾವ ರೀತಿಯ ಸಮಸ್ಯೆಗಳು ಎದುರಾಗುತ್ತವೆ ಎಂಬ ಅರಿವು ನನಗೆ ಇತ್ತು. ನಾವು ವಾರಕ್ಕೆ ಒಂದು ಸಾರಿ ಅಥವಾ ಎರಡು ಸಾರಿ ಬಸ್‌ನಲ್ಲಿ ೨-೩ ತಾಸು ಪ್ರಯಾಣ ಮಾಡುವುದರಲ್ಲೇ ಎಷ್ಟೋ ಸಮಸ್ಯೆಗಳನ್ನು ಪುರುಷರಿಂದ ಎದುರಿಸುತ್ತೇವೆ. ಮತ್ತು ಪ್ರಯಾಣ ಮಾಡಿದ್ದಾಗ ಎಷ್ಟೊಂದು ಸುಸ್ತಾಗುತ್ತೇವೆ. ಅಂತದರಲ್ಲಿ ದಿನದ ಹೆಚ್ಚಿನ ಸಮಯ ಜನರ ಮಧ್ಯನೇ ಕೆಲಸ ಮಾಡುವ ಮತ್ತು ದಿನಾಲು ಪ್ರಯಾಣ ಮಾಡುವುದರಿಂದ ಅವರು ಇನ್ನು ಎಷ್ಟೊಂದು ಬಗೆಯ ಸಮಸ್ಯೆಗಳಿಗೆ ಒಡ್ಡುತ್ತಾರೆ ಎಂಬುದನ್ನು ವ್ಯಕ್ತಿನಿಷ್ಠವಾಗಿ ಗ್ರಹಿಸುವುದರ ಮೂಲಕವಷ್ಟೇ ಅಧ್ಯಯನಕ್ಕೆ ಔಚಿತ್ಯ ಬರುತ್ತದೆ ಎಂಬುದನ್ನು ವ್ಯಕ್ತಿನಿಷ್ಟತೆಯ ಸಿದ್ಧಾಂತದ ಅನ್ವಯಿಕತೆಯಿಂದ ತಿಳಿದುಬರುತ್ತದೆ. ಈ ವ್ಯಕ್ತಿನಿಷ್ಠ ಹಿನ್ನೆಲೆಯಲ್ಲಿ ಮಹಿಳಾ

ಕಂಡಕ್ಟರ್‌ಗಳ ಸ್ಥಿತಿ-ಗತಿ ಹಾಗೂ ಸಮಸ್ಯೆಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗುವುದು.

**ಗುಣಾತ್ಮಕ ವಿಧಾನ :**

ಪ್ರಸ್ತುತ ಅಧ್ಯಯನವನ್ನು ಗುಣಾತ್ಮಕ ವಿಧಾನದ ಮೂಲಕ ಮಾಹಿತಿ ಸಂಗ್ರಹಿಸಲಾಗುವುದು ಮಹಿಳಾ ಕಂಡಕ್ಟರ್‌ಗಳ ಒಂದೇ ತರಹದ ಸಮಸ್ಯೆಯನ್ನು ಹಲವು ಮಹಿಳೆಯರು ಹೇಳದೆ ಈ ಸಮಸ್ಯೆ ನನಗೆ ಇದೆ ಎಂಬುದನ್ನು ಒಬ್ಬ ಮಹಿಳಾ ಕಂಡಕ್ಟರ್ ಹೇಳಿದ್ದರು ಅದನ್ನು ಕೂಡ ಪರಿಗಣಿಸಿ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗುವುದು.

**೧.೪ ಸಾರಿಗೆ ಸಂಸ್ಥೆ :**

ಕೃಷಿ ಮತ್ತು ಕೈಗಾರಿಕೆಗಳನ್ನು ಭಾರತದ ಆರ್ಥಿಕ ವ್ಯವಸ್ಥೆಯ ಶರೀರ ಮತ್ತು ಮೂಳೆ ಎಂದು ಪರಿಗಣಿಸಿದರೆ. ಸಾರಿಗೆ ರಕ್ತನಾಳವಾಗಿದೆ. ಇದು ಜನರ ಮತ್ತು ಸರಕುಗಳ ಸಾಗಾಣಿಕೆಗೆ ಸಹಕಾರಿಯಾಗಿದೆ. ಸಾರಿಗೆ ಸಂಸ್ಥೆಯು ದೇಶದ ಸರ್ವತೋಮುಖ ಅಭಿವೃದ್ಧಿಯಲ್ಲಿ ಬಹಳ ಮುಖ್ಯ ಪಾತ್ರವಹಿಸುತ್ತದೆ. ಸಾರಿಗೆ ವಸ್ತುಗಳ ಮಾರಾಟವನ್ನು ಹೆಚ್ಚು ಮಾಡುತ್ತದೆ. ವಸ್ತುಗಳ ಉತ್ಪಾದನೆಯನ್ನು ಹೆಚ್ಚು ಮಾಡುತ್ತದೆ. ಇಂಧನ, ಯಂತ್ರೋಪರಣ ಇತ್ಯಾದಿಗಳನ್ನು ಹೆಚ್ಚಿನ ಮಟ್ಟದಲ್ಲಿ ತಯಾರಿಸುವುದಕ್ಕೆ ಅನುಕೂಲವಾಗಿದೆ. ಸಾರಿಗೆ ಸಂಸ್ಥೆಯು ಅಭಿವೃದ್ಧಿ ಹೊಂದಿದಂತೆ ಜನರಿಗೆ ದೊರಕುವ ಉದ್ಯೋಗದ ಅವಕಾಶಗಳು ಒಂದು ರೀತಿಯಲ್ಲಿ ಅಧಿಕವಾದರೆ ಜನರು ದೇಶ ಹಾಗೂ ಜಗತ್ತಿನ ಬೇರೆ ಬೇರೆ ಪ್ರದೇಶಗಳಿಗೆ ಹೋಗಿ ಉದ್ಯೋಗಗಳನ್ನು ಮಾಡಲು ಸಾಧ್ಯವಾಗುತ್ತಿದೆ. ಹಳ್ಳಿ ಪ್ರದೇಶಗಳಿಂದ ಪಟ್ಟಣವು ದೇಶಗಳಿಗೆ ದುಡಿಯುವುದಕ್ಕೆ ಹೋಗಲು ಪ್ರೋತ್ಸಾಹಿಸುತ್ತದೆ. ಇದರಿಂದ ಜನಗಳ ಮುಗ್ಧತೆ ಮತ್ತು ಅಜ್ಞಾನಗಳು ಕಡಿಮೆ ಮಾಡುತ್ತದೆ.

ಭಾರತದಂತಹ ಹಿಂದುಳಿದ ರಾಷ್ಟ್ರಗಳಲ್ಲಿ ಜನರು ಸಾಂಪ್ರದಾಯಿಕ ಮೂಢನಂಬಿಕೆಯಿಂದ ಜೀವನ ಸಾಗಿಸುವವರಾಗಿದ್ದಾರೆ. ಆದ್ದರಿಂದ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗುವುದರಿಂದ ಮತ್ತು ಜನರ ಜೊತೆ ಬೆರೆಯುವುದರಿಂದ ಜನರಿಗೆ ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಜನರ ಮುಗ್ಧತೆ ಮತ್ತು ಮೂಢನಂಬಿಕೆಗಳಲ್ಲಿ ಮಾರ್ಪಾಟಾಗುತ್ತದೆ. ಭಾರತವು ಒಂದು ಪ್ರಜಾಪ್ರಭುತ್ವ ರಾಷ್ಟ್ರವಾಗಿದ್ದು, ಇಲ್ಲಿ ದೇಶದ ಎಲ್ಲಾ ರಾಜ್ಯಗಳ ಜನತೆಗೆ ಪ್ರತಿನಿಧಿಗಳು ಒಟ್ಟು ಸೇರಿ ಆಡಳಿತ ನಡೆಸುವರು. ಅಂದರೆ ದೇಶದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಲಯಗಳ ಕರ್ತವ್ಯ ನಿರ್ವಹಿಸುವುದಕ್ಕೆ, ಹಾಗೂ ಜನರಿಗೆ ಒಳ್ಳೆಯ ದಕ್ಷ ಆಡಳಿತವನ್ನು ಒದಗಿಸುವುದಕ್ಕೆ ಮತ್ತು ತೀರ ಹಿಂದುಳಿದ ಪ್ರದೇಶಗಳಿಗೆ ಅಗತ್ಯವಿರುವ ಮೂಲಭೂತ ಸೌಲಭ್ಯಗಳನ್ನು ಒದಗಿಸಿಕೊಡುತ್ತವೆ. ಜನರು ಹೆಚ್ಚಿರುವ ಈ ಪ್ರದೇಶದಿಂದ ಕಡಿಮೆ ಜನರು ಇರುವ ಪ್ರದೇಶಕ್ಕೆ ಜನರನ್ನು ಕಳುಹಿಸುವುದರಿಂದ ಜನರ ಆರ್ಥಿಕ ವ್ಯವಸ್ಥೆಯು ಅಭಿವೃದ್ಧಿ ಹೊಂದಲು ಸಹಾಯಕವಾಗಿದೆ.

### ೧.೫ ಸಾರಿಗೆ ಸಂಸ್ಥೆಯಲ್ಲಿ ಲಿಂಗಾಧಾರಿತ ಕಾರ್ಯ ಸ್ವರೂಪ :

ಸಾರಿಗೆ ಸಂಸ್ಥೆಯು ಮಾನವನಿಗೆ ತುಂಬಾ ಉಪಯುಕ್ತವಾದಂತಹ ಸಂಸ್ಥೆಯಾಗಿದೆ. ಇಷ್ಟೊಂದು ಬೃಹತ್ ಸಂಸ್ಥೆಯಲ್ಲಿ ಅನೇಕ ದಶಕಗಳ ಕಾಲ ಪುರುಷರು ಮಾತ್ರವೇ ಕೆಲಸ ಮಾಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಈಶಾನ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಗುಲ್ಬರ್ಗಾ ಘಟಕದಡಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಬಳ್ಳಾರಿ ಜಿಲ್ಲೆಯಲ್ಲಿ ೫ ಡಿಪೋಗಳಿವೆ. ಈ ಎಲ್ಲಾ ಘಟಕಗಳು ಸ್ಥಾಪನೆಯಾಗಿ ಹಲವಾರು ದಶಕಗಳೇ ಕಳೆದಿವೆ. ಇಷ್ಟು ದಶಕಗಳ ಕಾಲ ಈ ಸಂಸ್ಥೆಯಲ್ಲಿ ಪುರುಷರು ಮಾತ್ರ ಕೆಲಸ ಮಾಡುತ್ತಾ ಬಂದಿದ್ದಾರೆ. ಈ ಸಂಸ್ಥೆ ಕಾರ್ಯ ನಿರ್ವಹಿಸುವ ಒಟ್ಟು ಕೆಲಸಗಾರರಲ್ಲಿ ೯೦ರಷ್ಟು ಪುರುಷರು ಮಾತ್ರ ಕಾರ್ಯ ನಿರ್ವಹಿಸುತ್ತಿದ್ದಾರೆ. ಇನ್ನು ೧೦ರಷ್ಟು ಇತ್ತೀಚೆಗೆ ಮಹಿಳೆಯರು ಈ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಸ್ಥೆಯು ಸಾರ್ವಜನಿಕ ವಲಯವಾದ್ದರಿಂದ ಈ ಪುರುಷಪ್ರಧಾನ ಸಮಾಜದಲ್ಲಿ ಪುರುಷರು ಯಾವ ವಲಯಗಳಲ್ಲಾದರೂ ಕೆಲಸ ಮಾಡಬಹುದು. ಅದು ಅವರ ಆಯ್ಕೆ ವಿಷಯವಾಗಿದೆ. ಈ ಸಂಸ್ಥೆಯಲ್ಲಿ ಪುರುಷರು ಮಾತ್ರ ಎಲ್ಲಾ ವರ್ಗಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ದಿನಾಲು ಸಾವಿರಾರು ಜನರ ಜೊತೆ ಬೆರೆತು ಕೆಲಸ ಮಾಡಬೇಕಾಗಿರುವುದರಿಂದ ಜನರನ್ನು ನಿಭಾಯಿಸುವುದಕ್ಕೆ ಪುರುಷರಿಂದ ಮಾತ್ರ ಸಾಧ್ಯ ಎಂಬ ನಂಬಿಕೆ ಈ ಸಮಾಜದಲ್ಲಿ ರೂಪುಗೊಂಡಿದೆ. ಮತ್ತು ಎಂತಹ ಪರಿಶ್ರಮವಿರುವ ಕೆಲಸವನ್ನು ಪುರುಷರು ಮಾಡಬಲ್ಲರು ಎಂಬ ನಂಬಿಕೆ ಈ ಸಮಾಜದಲ್ಲಿ ಗಟ್ಟಿಗೊಂಡಿರುವುದರಿಂದ ಈ ಸಂಸ್ಥೆಯಲ್ಲಿ ಪುರುಷರು ಡಿ.ಸಿ.ಯಿಂದ ಹಿಡಿದು ಮ್ಯಾನೇಜರ್, ಟ್ರಾಫಿಕ್ ಇನ್ಸ್‌ಪೆಕ್ಟರ್, ಡ್ರೈವರ್, ಕಂಟ್ರೋಲರ್, ಕಂಡಕ್ಟರ್, ಮೆಕಾನಿಕ್ ಕೆಲಸಗಳನ್ನು ಪುರುಷರು ಮಾತ್ರ ಮಾಡುತ್ತಿದ್ದಾರೆ. ಯಾವ ಕೆಲಸಗಳು ನೀತಿ-ನಿರ್ಣಯಗಳನ್ನು ಒಳಗೊಂಡಿವೆಯೋ, ಜವಾಬ್ದಾರಿ ಹೊಣೆಗಾರಿಕೆಗಳನ್ನು ಒಳಗೊಂಡಿರುತ್ತವೆಯೋ, ಅಂತ ಉದ್ಯೋಗಗಳನ್ನು ಪುರುಷರು ಮಾತ್ರ ಮಾಡಲು ಸಾಧ್ಯ ಎನ್ನುವ ರೀತಿಯಲ್ಲಿ ಈ ಪುರುಷಪ್ರಧಾನ ಸಮಾಜ ವ್ಯಾಖ್ಯಾನಿಸಿಬಿಟ್ಟಿದೆ.

### ೧.೬ ಸಾರಿಗೆ ಸಂಸ್ಥೆಯಲ್ಲಿ ಮಹಿಳೆಯರ ಪ್ರವೇಶ :

ಈ ಸಂಸ್ಥೆಯಲ್ಲಿ ಅನೇಕ ದಶಕಗಳ ಕಾಲ ಪುರುಷರು ಮಾತ್ರ ಕೆಲಸ ಮಾಡುತ್ತಿದ್ದಾರೆ. ಆದರೆ ಕೆಲವು ವರ್ಷದಿಂದ ಈ ಸಂಸ್ಥೆಗೆ ಮಹಿಳೆಯರು ಪ್ರವೇಶ ಪಡೆದಿದ್ದಾರೆ. ಅದು ಎಂತಹ ಕೆಲಸಗಳಿಗೆ ಅಂದರೆ ಕೆಳದರ್ಜೆಯ ಕೆಲಸಗಳಾದ ಕಂಡಕ್ಟರ್ ಮತ್ತು ಕಸ ಗುಡಿಸುವಂತಹ ಕೆಲಸಗಳಲ್ಲಿ ಮಾತ್ರ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಕ್ಲರ್ಕ್‌ಗಳಂತಹ ಕೆಲಸ, ಕಂಟ್ರೋಲರ್, ಮ್ಯಾನೇಜರ್‌ಗಳಂತಹ ಮೇಲ್‌ದರ್ಜೆಯ ಉದ್ಯೋಗದಲ್ಲಿ ಮಹಿಳೆಯರು ಕೆಲಸಗಳಲ್ಲಿ ಕಂಡುಬರುತ್ತಿಲ್ಲ. ಮಹಿಳೆಯರು ಇಂತಹ ಕೆಳದರ್ಜೆಯ ಕಂಡಕ್ಟರ್ ಹುದ್ದೆಗೆ ಬಂದಿರುವುದರಿಂದ ಪುರುಷರು ಏನು ಹೇಳುತ್ತಾರೆ ಎಂದರೆ, ಮಹಿಳೆಯರು ನಮ್ಮ ಉದ್ಯೋಗವನ್ನು ಕಸಿದುಕೊಂಡಿದ್ದಾರೆ. ನಮ್ಮ ಹೊಟ್ಟೆ ಮೇಲೆ ಹೊಡೆಯುತ್ತಿದ್ದಾರೆ.

ನಮ್ಮನ್ನು ನಿರುದ್ಯೋಗಿಗಳನ್ನಾಗಿ ಮಾಡುತ್ತಿದ್ದಾರೆ ಎಂಬ ಅಪವಾದವನ್ನು ಹೊರಿಸಿದ್ದಾರೆ. ಕಂಡಕ್ಟರ್ ಉದ್ಯೋಗ ಮಹಿಳೆಯರು ಮಾಡುವಂತಹ ಕೆಲಸವಲ್ಲ. ಮಹಿಳೆಯರು ಇಂತಹ ಕೆಲಸ ಮಾಡುವುದರಿಂದ ಅವರನ್ನು ಮದುವೆಯಾಗುವುದಕ್ಕೆ ಯಾರೂ ಮುಂದೆ ಬರುವುದಿಲ್ಲ. ಈ ಕೆಲಸ ಅವರ ಭವಿಷ್ಯಕ್ಕೆ ತೊಂದರೆಯಾಗುತ್ತದೆ. ಈ ಕೆಲಸಕ್ಕೆ ಬರುವವರು ಮಾರ್ಯಾದಸ್ಥ ಕುಟುಂಬದ ಹೆಣ್ಣುಮಕ್ಕಳಲ್ಲ. ಮಹಿಳೆಯರು ರಾತ್ರಿ ತಡವಾಗಿ ಬರಬಾರದು ಎಂದು ಮಹಿಳಾ ಕಂಡಕ್ಟರ್‌ಗಳನ್ನು ಬರಿ ಸೆಟ್ಲಗಾಡಿಗಳಿಗೆ ಸಿಟಿ ಬಸ್‌ಗಳಿಗೆ ಮಾತ್ರ ಡ್ಯೂಟಿಗೆ ಹಾಕುತ್ತಿದ್ದಾರೆ. ಮಹಿಳೆಯರನ್ನು ಬರಿ ಸಿಟಿಗಾಡಿಗಳಿಗೆ ಹಾಕುವುದರಿಂದ ಅವರಿಗೆ ಬಿಡುವು ಎನ್ನುವುದೇ ಇರುವುದಿಲ್ಲ. ನಿರಂತರವಾಗಿ ನಿಂತುಕೊಂಡೆ ಕೆಲಸ ಮಾಡುತ್ತಿದ್ದಾರೆ. ಸಹೋದ್ಯೋಗಿಗಳ ಜೊತೆ ಮತ್ತು ಪ್ರಯಾಣಿಕರ ಜೊತೆ ಹೆಚ್ಚು ಮಾತನಾಡಬಾರದು ಎಂಬ ನಿರ್ಬಂಧಗಳನ್ನು ಹಾಕುತ್ತಿದ್ದಾರೆ. ರಾತ್ರಿಪಾಳಿಗೆ ಮಹಿಳೆಯರನ್ನು ಡ್ಯೂಟಿಗೆ ಹಾಕಿದರೆ ಅವರಿಗೆ ಅಲ್ಲಿ ಉಳಿದುಕೊಳ್ಳುವುದಕ್ಕೆ ಇನ್ನಿತರ ಸೌಲಭ್ಯಗಳನ್ನು ಒದಗಿಸಬೇಕಾಗುತ್ತದೆ. ಇದೆಲ್ಲ ರಿಸ್ಕ್ ಏಕೆ ಎಂದು ಮಹಿಳೆಯರನ್ನು ಜನರಲ್ ಶಿಫ್ಟ್‌ಗಳಿಗೆ ಹಾಕಿದರೆ ಬೆಳಿಗ್ಗೆ ಹೋಗಿ ರಾತ್ರಿ ಎಷ್ಟೊತ್ತಿಗಾದರೂ ವಾಪಾಸು ಡಿಪೋಕ್ಕೆ ಬಂದು ಬಿಡಬೇಕು ಎಂದು ಮಹಿಳಾ ಕಂಡಕ್ಟರ್‌ಗಳನ್ನು ಲಾಂಗ್‌ರೂಟ್‌ಗೆ ಹಾಕುವುದಿಲ್ಲ. ಈ ಉದ್ಯೋಗ ಸಾರ್ವಜನಿಕ ವಲಯವಾದ್ದರಿಂದ ಜನರ ಮಧ್ಯೆ ದಿನದ ಹೆಚ್ಚಿನ ಸಮಯ ಕೆಲಸ ಮಾಡಬೇಕಾಗಿದೆ. ಹೀಗಾಗಿ ಇಲ್ಲಿನ ಮಹಿಕಂಡಕ್ಟರ್‌ಗಳು ಪ್ರಯಾಣಿಕರಿಂದ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅದರಲ್ಲಿ ಮುಖ್ಯವಾಗಿ ಲೈಂಗಿಕ ಕಿರಕುಳಗಳಂತಹ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇನ್ನಿತರ ಸಮಸ್ಯೆಗಳಾದ ಬಸ್ ಕೆಟ್ಟಾಗ ಪ್ರಯಾಣಿಕರು ಅಸಭ್ಯವರ್ತನೆಯಿಂದ ನಡೆದುಕೊಳ್ಳುವುದು ಸರಿಯಾಗಿ ಟಿಕೇಟು ತೆಗೆದುಕೊಳ್ಳದೆ ಸತಾಯಿಸುವುದು. ಸ್ಟಾಪ್ ಕೊಡದೆ ಇದ್ದಾಗ ಅವರು ಅವರೊಂದಿಗೆ ನಡೆದುಕೊಳ್ಳುವುದು ಇತ್ಯಾದಿ ಸಮಸ್ಯೆಗಳಿಂದ ಇವರು ಮಾನಸಿಕವಾಗಿ ತುಂಬ ನೋವನ್ನು ಅನುಭವಿಸುತ್ತಿದ್ದಾರೆ. ಮೇಲಾಧಿಕಾರಿಗಳು ಹಾಕುವಂತಹ ಕೆಲಸದ ಒತ್ತಡದಿಂದ ಮತ್ತು ಕೆಲಸದ ವಿಷಯದಲ್ಲಿ ನಡೆದುಕೊಳ್ಳುವ ರೀತಿಯಿಂದ ತುಂಬಾ ಅಸಮಧಾನ ಹೊಂದಿದ್ದಾರೆ. ಸಹೋದ್ಯೋಗಿಗಳಲ್ಲಿ ಕೆಲವರು ಮಹಿಳಾ ಕಂಡಕ್ಟರ್‌ಗಳನ್ನು ಸಹೋದ್ಯೋಗಿ ಎಂದು ಕಾಣದೆ ಒಂದು ಹೆಣ್ಣು ಎನ್ನುವ ರೀತಿಯಲ್ಲಿ ಕಾಣುತ್ತಿದ್ದಾರೆ, ಮತ್ತು ಪ್ರಯಾಣಿಕರು ನಮ್ಮ ಮೇಲೆ ಗಲಾಟೆ ಮಾಡಿದರೆ ಡ್ರೈವರ್‌ಗಳು ನಮ್ಮ ಸಹಾಯಕ್ಕೆ ಬರುವುದಿಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದ್ದಾರೆ.

ಶಿಕ್ಷಕ ಉದ್ಯೋಗ ಮಾಡುವಂತಹ ಮಹಿಳೆಯರಿಗೆ ಸಮಾಜದಲ್ಲಿ ಸಿಗುವ ಗೌರವ, ಮರ್ಯಾದೆ, ಸ್ಥಾನಮಾನ ಮಹಿಳಾ ಕಂಡಕ್ಟರ್‌ಗಳಿಗೆ ಸಮಾಜದಲ್ಲಿ ಸಿಗುತ್ತಿಲ್ಲ. ಅವರನ್ನು ಕೀಳುದೃಷ್ಟಿಯಿಂದ ನೋಡುವುದು, ಅವರು ಈ ಉದ್ಯೋಗ ಮಾಡುತ್ತಿರುವುದರಿಂದ ಅವರ ಶೀಲದ ಬಗ್ಗೆ ಅನುಮಾನ ಪಡುವುದರಿಂದ ಮಹಿಳಾ ಕಂಡಕ್ಟರ್‌ಗಳು ವೈವಾಹಿಕ ಜೀವನದಲ್ಲಿ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆರೋಗ್ಯದಲ್ಲಿಯೂ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕೆಲಸದ ಒತ್ತಡದಿಂದ

ಮತ್ತು ನಿಂತುಕೊಂಡೆ ಕೆಲಸ ಮಾಡುವುದರಿಂದ ವಿಶ್ರಾಂತಿ ಇಲ್ಲದೆ ನಿರಂತರವಾಗಿ ಕೆಲಸದಲ್ಲಿ ನಿರತರಾಗಿರುವುದರಿಂದ ಪದೇ ಪದೇ ಗರ್ಭಪಾತದಂತಹ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಮಾನಸಿಕವಾಗಿ, ದೈಹಿಕವಾಗಿ ಕುಗ್ಗಿದವರಾಗಿದ್ದಾರೆ. ಮುಟ್ಟಿನ ತೊಂದರೆಯನ್ನು ಎದುರಿಸುತ್ತಿದ್ದಾರೆ. ಧೂಳಿನಿಂದ ಉಸಿರಾಟದ ತೊಂದರೆಯನ್ನು ಅನುಭವಿಸುತ್ತಿದ್ದಾರೆ. ಕೆಲಸದ ಸ್ಥಳದಲ್ಲಿ ಮೂಲಭೂತ ಸೌಲಭ್ಯಗಳಿಲ್ಲದೆ, ಶೌಚಾಲಯ ವ್ಯವಸ್ಥೆ, ವಿಶ್ರಾಂತಿ ಸ್ಥಳ ಇಲ್ಲದೆ ತಿಂಗಳ ಮುಟ್ಟಿನ ಸಂದರ್ಭದಲ್ಲಿ ಅನೇಕ ರೀತಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಶಿಶುಪಾಲನಾ ಕೇಂದ್ರಗಳು ಇಲ್ಲದಿರುವುದರಿಂದ ಮಹಿಳಾ ಕಂಡಕ್ಟರ್‌ಗಳಿಗೆ ತಮ್ಮ ಮಕ್ಕಳಿಗೆ ಬಸ್‌ಸ್ಟ್ಯಾಂಡ್‌ನಲ್ಲಿಯೇ ಕೂತು ಹಾಲು ಕುಡಿಸುವಂತಹ ಪರಿಸ್ಥಿತಿ ಅವರದಾಗಿದೆ. ಇದರಿಂದ ಮಕ್ಕಳ ಆರೋಗ್ಯದ ಮೇಲೆ ಪರಿಣಾಮ ಉಂಟಾಗುತ್ತಿದೆ. ಮನೆಗಳು ದೂರವಿದ್ದರೆ ಮಧ್ಯಾಹ್ನ ಮಕ್ಕಳಿಗೆ ಹಾಲು ಕುಡಿಸುವದಕ್ಕೆ ಆಗದೇ ಹಾಗೆ ಕೆಲಸದಲ್ಲಿ ನಿರತರಾಗುವುದರಿಂದ ರಾತ್ರಿ ಎಷ್ಟೊತ್ತು ಆಗುತೋ ಗೊತ್ತಿಲ್ಲ ಅಲ್ಲಿಯವರೆಗೂ ಮಕ್ಕಳನ್ನು ಉಪವಾಸ ಕೆಡಹುವಂತಹ ಸಂದರ್ಭಗಳನ್ನು ಎದುರಿಸುತ್ತಿದ್ದಾರೆ. ಮಕ್ಕಳಿಗೆ ಹಾಲು ಕೊಡದೆ ಹಾಗೆ ಕೆಲಸಕ್ಕೆ ಹೋಗುವುದರಿಂದ ಎದೆಯಲ್ಲಿ ಹಾಲು ಹೆಚ್ಚಾಗಿ ಎದೆನೋವು ಅನುಭವಿಸುತ್ತಿದ್ದಾರೆ. ಹೊರಗಡೆ ೧೩-೧೪ ತಾಸು ಕೆಲಸ ಮಾಡುವುದಲ್ಲದೆ ಮನೆಯಲ್ಲಿಯ ಅಡುಗೆ ಕೆಲಸ, ಮಕ್ಕಳ, ಹಿರಿಯರ ಸೇವೆಯನ್ನು ಕೂಡ ಮಾಡಬೇಕಾಗಿದೆ. ಇವರು ಸರ್ಕಾರಿ ಕೆಲಸದಲ್ಲಿ ಇದ್ದರೂ ಆರ್ಥಿಕವಾಗಿ ಸ್ವತಂತ್ರ್ಯರಾಗಿಲ್ಲ. ದುಡಿದು ತಂದದ್ದನ್ನು ಗಂಡ, ತಂದೆ ಅಥವಾ ಅಣ್ಣನ ಕೈಗೆ ಕೊಟ್ಟು ತನ್ನ ಸ್ವತಃ ಖರ್ಚಿಗೆ ಅವರ ಮುಖವನ್ನು ನೋಡುವಂತಾಗಿದೆ. ಮಹಿಳಾ ಕಂಡಕ್ಟರ್‌ಗಳು ಪುರುಷ ಸಹೋದ್ಯೋಗಗಳ ಜೊತೆ ಕೆಲಸ ಮಾಡುವುದರಿಂದ ಶೀಲದ ಬಗ್ಗೆ ಅನುಮಾನ ಪಟ್ಟು ಅವರನ್ನು ಸಂಪ್ರಾದಾಯಸ್ಥ ಕುಟುಂಬದವರು ಮತ್ತು ಉದ್ಯೋಗಸ್ಥರು ಇವರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಹಿಂದೆ ಮುಂದೆ ನೋಡುತ್ತಾರೆ. ಆದ್ದರಿಂದ ಈ ಎಲ್ಲಾ ಸಮಸ್ಯೆಗಳನ್ನು ವಿವರಿಸುವಂತಹ ಅಗತ್ಯವಿದೆ. ಆದ್ದರಿಂದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳು ಇನ್ನೂ ಯಾವ ಯಾವ ರೀತಿಯ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ ಎಂಬುದನ್ನು ನಾನು ಈ ಸಂಪ್ರಬಂಧದಲ್ಲಿ ಹೇಳಲು ಪ್ರಯತ್ನಿಸುತ್ತಿದ್ದೇನೆ. ಅದಕ್ಕಾಗಿ ಹೈದ್ರಾಬಾದ್ ಕರ್ನಾಟಕದಲ್ಲಿರುವ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಹೊಸಪೇಟೆ ಘಟಕದಲ್ಲಿ ಕಾರ್ಯ ನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳನ್ನು ಅಧ್ಯಯನಕ್ಕೆ ಆಯ್ದುಕೊಂಡಿದ್ದೇನೆ. ಈ ಎರಡು ಡಿಪೋದಲ್ಲಿ ಕೆಲಸ ಮಾಡುವ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳ ಸಮಗ್ರ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲು ಈ ಪ್ರಬಂಧದ ನಾಲ್ಕು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ.

## ೧.೭ ಈ ವರೆಗಿನ ಅಧ್ಯಯನಗಳ ಸಮೀಕ್ಷೆ :

ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಮತ್ತು ಸಮಸ್ಯೆಗಳು ಎಂಬ ಪರಿಕಲ್ಪನೆಗೆ ಸಂಬಂಧಪಟ್ಟಂತೆ ಸಂಶೋಧನಾ ಅಧ್ಯಯನಗಳೇನು ನಡೆದಿಲ್ಲ. ಆದರೆ ದಿನಪತ್ರಿಕೆಯಲ್ಲಿ ತಿಂಗಳ ಪತ್ರಿಕೆಗಳಲ್ಲಿ ಈ

ವಿಷಯಕ್ಕೆ ಸಂಬಂಧಪಟ್ಟಂತೆ ಕೆಲವು ಬಿಡಿ ಲೇಖನಗಳು ಮಾತ್ರ ಪ್ರಕಟಣೆಗೊಂಡಿವೆ. ಈ ಲೇಖನಗಳ ವಿವರಗಳನ್ನು ಈ ಕೆಳಕಂಡಂತೆ ಸಂಕ್ಷಿಪ್ತವಾಗಿ ನೋಡಬಹುದು.

ರಶ್ಮಿ ಎಸ್ ಅವರು ಬರೆದಿರುವ "ಬಸ್‌ಗಳ ನಿರ್ವಹಣೆಯ ಬವಣೆ" ೦೨.೦೧.೦೩ ಸುಧಾ ತಿಂಗಳ ಪತ್ರಿಕೆಯಲ್ಲಿ ಪ್ರಕಟವಾಗಿರುವ ಈ ಲೇಖನದಲ್ಲಿ ಮಹಿಳಾ ಕಂಡಕ್ಟರ್‌ಗಳ ಸ್ಥಿತಿ ಕುರಿತು ಅವರು ಎದುರಿಸುವಂತಹ ಸಮಸ್ಯೆಗಳಲ್ಲಿ ಮುಖ್ಯವಾಗಿ ಕೌಟುಂಬಿಕ ಸಮಸ್ಯೆ ·ಬಗ್ಗೆ ವೈವಾಹಿಕ ಸಮಸ್ಯೆಗಳನ್ನು ಕೆಲಸದ. ಸ್ಥಳದಲ್ಲಿ ಪ್ರಯಾಣಿಕರಿಂದ ಎದುರಿಸುವಂತಹ ಲೈಂಗಿಕ ಕಿರುಕುಳಗಳ ಬಗ್ಗೆ ತಿಳಿಸಲಾಗಿದೆ ಮತ್ತು ಇನ್ನಿತರ ಸಾಮಾನ್ಯ ಸಮಸ್ಯೆಗಳ ಬಗ್ಗೆ ಕೆಲಸದ ಸ್ಥಳದಲ್ಲಿ ಮೂಲಭೂತ ಸೌಲಭ್ಯಗಳಿಲ್ಲದ್ದರಿಂದ ಯಾವ ರೀತಿಯ ಸಮಸ್ಯೆಗಳು ಎದುರಿಸುತ್ತಿದ್ದಾರೆ ಎಂಬುದರ ಬಗ್ಗೆ ಚರ್ಚೆ ಮಾಡಿದ್ದಾರೆ.

ವಿಶಾಲಾಕ್ಷಿ ಅಕ್ಕಿರವರು ಬರೆದಿರುವ "ಇಂದು ಕಂಡಕ್ಟರ್ ನಾಳೆ ಡ್ರೈವರ್" ೦೬.೦೧.೦೫ ಪ್ರಜಾವಾಣಿಯಲ್ಲಿ ಪ್ರಕಟವಾಗಿರುವ ಈ ಲೇಖನದಲ್ಲಿ ಚಲಿಸುತ್ತಿರುವ ಬಸ್‌ನಲ್ಲಿ ಭರಭರ ಓಡಾಡುತ್ತಾ ಸರಸರ ದುಡ್ಡು ಪಡೆದು, ಟಿಕೇಟು ಹರಿದು ನೀಡುವ ಮಹಿಳಾ ಕಾಂಡಕ್ಟರ್‌ಗಳ ಕೆಲಸ ಕಣ್ಣಿಗೆ ಕಾಣುವಷ್ಟೇ ಸರಳವಾಗಿ ಇಲ್ಲ ಎಂಬುದರ ಬಗ್ಗೆ, ಜನಜಂಗುಳಿಯನ್ನು ನಿಭಾಯಿಸುತ್ತಾ ತರಲೆಗಳಿಗೆ ದಬಾಯಿಸುತ್ತಾ ನಿಂತೇ ಮಾಡುವ ಕೆಲಸ ಅವರಿಗೆಷ್ಟು ಖುಷಿ ನೀಡಿದೆ. ಅವರ ಕಾರ್ಯಕ್ಷಮತೆಯ ಬಗ್ಗೆ ಸಾರ್ವಜನಿಕರಿಗೆಷ್ಟು ತೃಪ್ತಿ ಇದೆ ಎಂಬುದರ ಬಗ್ಗೆ, ಕೆ.ಎಸ್.ಆರ್.ಟಿ.ಸಿ ಮತ್ತು ಬಿ.ಎಂ.ಟಿ.ಸಿ ಸಾರಿಗೆಯಲ್ಲಿ ಮಹಿಳಾ ಕಂಡಕ್ಟರ್‌ಗಳಾಗಿ ಕೆಲಸ ಮಾಡುತ್ತಿರುವವರು ಗ್ರಾಮೀಣ ಪ್ರದೇಶದವರೆಂದು ತಿಳಿಸಿದ್ದಾರೆ. ಕಂಡಕ್ಟರ್ ಕೆಲಸ ಸಿಗಬೇಕೆಂದರೆ ಪಿ.ಯು.ಸಿ ಓದಿದರೆ ಸಾಕು. ಆದರೆ ಕಂಡಕ್ಟರ್ ಕೆಲಸ ಮಾಡುತ್ತಿರುವವರು ಬಿ.ಎ., ಬಿ.ಕಾಂ, ಲಾ ಓದಿದವರು ಕೆಲಸ ಮಾಡುತ್ತಿದ್ದಾರೆಂದು ಹೇಳಿದ್ದಾರೆ. ಈ ಕೆಲಸಕ್ಕೆ ಬರಲು ಇರುವ ಕಾರಣಗಳ ಬಗ್ಗೆ ಮಹಿಳಾ ಕಂಡಕ್ಟರ್‌ಗಳನ್ನು ಹೆಚ್ಚಾಗಿ ಯಾವ ಶಿಫ್ಟ್‌ಗಳಿಗೆ ಹಾಕುತ್ತಾರೆ ಎಂಬುದರ ಬಗ್ಗೆ, ಸಹೋದ್ಯೋಗಿಗಳು ಇವರಿಗೆ ಯಾವ ರೀತಿ ಸಹಕಾರ ನೀಡುತ್ತಾರೆ. ತಿಂಗಳ ಮುಟ್ಟಿನ ಸಂದರ್ಭದಲ್ಲಿ ಕೆಲಸ ಮಾಡುವುದಕ್ಕೆ ಯಾವ ರೀತಿ ಕಷ್ಟವಾಗುತ್ತದೆ ಎಂಬುದರ ಬಗ್ಗೆ, ಕೆಲಸದ ಸ್ಥಳದಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಇರುವುದರಿಂದ ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದರ ಬಗ್ಗೆ, ಡಿಪೋ ಮ್ಯಾನೇಜರ್‌ಗಳು ಮಹಿಳಾ ಕಂಡಕ್ಟರ್‌ಗಳ ಜೊತೆ ನಡೆದುಕೊಳ್ಳುವ ರೀತಿಯ ಬಗ್ಗೆ ಅಸಮಧಾನ ವ್ಯಕ್ತಪಡಿಸಿರುವುದರ ಬಗ್ಗೆ, ಕೆಲಸ ಮುಗಿಸಿ ಮನೆಗೆ ಬರುವಾಗ ಕಲೆಕ್ಷನ್ ಕಟ್ಟಿ ಬರುವಾಗ ದುಡ್ಡಿದೆಯೋ ಇಲ್ಲವೋ ಎಂಬುದರ ಪರೀಕ್ಷೆ ಮಾಡುವ ವಿಧಾನ ಯಾವುದು ಆ ವಿಧಾನದಿಂದ ಅವರ ಮನಸ್ಸಿಗೆ ಯಾವ ರೀತಿ ನೋವುಂಟಾಗುತ್ತದೆ ಎಂಬುದರ ಬಗ್ಗೆ ತಿಳಿಸಿದ್ದಾರೆ.

ಶೀಲಾ.ಸಿ.ಶೆಟ್ಟಿರವರು ಬರೆದಿರುವ "ನಿರ್ವಾಹಕಿಯರ ಸಮಸ್ಯೆಗೆ ಎಲ್ಲಿದೆ ಸ್ಟಾಪ್?" ೨೬.೦೫.೦೬ರಂದು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಬರೆದಿರುವ ಈ ಲೇಖನದಲ್ಲಿ ಮಹಿಳಾ ಕಂಡಕ್ಟರ್‌ಗಳು ದಿನಾಲು ಪ್ರಯಾಣಿಕರಿಂದ ಯಾವ ಯಾವ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಪ್ರತಿ ದಿನ ಸಾವಿರಾರು

ಮಂದಿಯೊಂದಿಗೆ ಮಾತುಕತೆ, ಟಿಕೇಟು ಹಂಚಿಕೆ, ಪೋಲಿಪುಂಡ ಪ್ರಯಾಣಿಕರ ಕಿರಿಕಿರಿ, ಕುಡುಕರ ಪೋಲಾಟಗಳ ನಡುವೆ ಹಿಂದಿನ ಬಾಗಿಲಿನಿಂದ ಮುಂದಿನ ಚಾಲಕನ ಆಸನದವರೆಗೂ ಹರಸಾಹಸದಿಂದ ಮುನ್ನುಗುವ ಬಗ್ಗೆ, ಮಹಿಳಾ ಕಂಡಕ್ಟರ್‌ಗಳನ್ನು ಹೆಚ್ಚಾಗಿ ಯಾವ ಶಿಫ್ಟ್‌ಗಳಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಹೆಚ್ಚಾಗಿ ಮಹಿಳೆಯರು ಏಕೆ ರಾತ್ರಿಪಾಳಿ ಕಾರ್ಯ ನಿರ್ವಹಿಸುವುದಿಲ್ಲ ಅದಕ್ಕೆ ಕಾರಣವೇನು ಮತ್ತು ಎಷ್ಟು ಮಹಿಳೆಯರು ಬೆಂಗಳೂರಿನಲ್ಲಿ ಉತ್ಸಾಹದಿಂದ ಕಂಡಕ್ಟರ್ ಕೆಲಸ ಮಾಡುತ್ತಾರೆ. ಎಷ್ಟು ಮಹಿಳೆಯರು ಅನಿವಾರ್ಯತೆಯಿಂದ ಕೆಲಸ ಮಾಡುತ್ತಾರೆ ಎಂಬುದರ ಬಗ್ಗೆ ತಿಳಿಸಿದ್ದಾರೆ. ಡಿಪೋ ಮ್ಯಾನೇಜರ್‌ಗಳು ಮಹಿಳಾ ಕಂಡಕ್ಟರ್‌ಗಳಿಗೆ ನೀಡುವಂತಹ ಮಾನಸಿಕ ಕಿರುಕುಳದ ಬಗ್ಗೆ, ಮೂಲಭೂತ ಸೌಲಭ್ಯಗಳಾದ ಶೌಚಾಲಯ ವ್ಯವಸ್ಥೆ, ವಿಶ್ರಾಂತಿ ಕೊಠಡಿಗಳ ಬಗ್ಗೆ, ಆದರೆ ಪ್ರತಿ ಬಸ್ ನಿಲ್ಲುವ ಕೊನೆ ನಿಲ್ದಾಣದಲ್ಲಿ ಶೌಚಾಲಯ ಇಲ್ಲದಿರುವುದರಿಂದ ಋತುಚಕ್ರದ ಸಮಯದಲ್ಲಿ ನಿರ್ವಾಹಕಿಯರು ಸಮಸ್ಯೆಗಳ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯ ಎರಡು

# ಉದ್ಯೋಗಸ್ಥ ಮಹಿಳೆ ಮತ್ತು ಮಹಿಳಾ ಕಂಡಕ್ಟರ್‌ಗಳು

೨.೧ ನಿರ್ವಾಹಕಿಯರ ಬಗೆಗಿನ ಸಾಮಾಜಿಕ ದೃಷ್ಟಿ

೨.೨ ಉದ್ಯೋಗದ ಆಯ್ಕೆಗೆ ಇರುವ ಕಾರಣಗಳು

೨.೩ ಮಹಿಳಾ ಕಂಡಕ್ಟರ್‌ಗಳು ಎದುರಿಸುತ್ತಿರುವ ಸಮಸ್ಯೆಗಳು

ಅ. ಪ್ರಯಾಣಿಕರಿಂದ ಲೈಂಗಿಕ ಕಿರುಕುಳ

ಆ. ಮಾನಸಿಕ ಕಿರುಕುಳ

ಇ. ಸಹಕಾರದ ಕೊರತೆ

೨.೪ ಕೌಟುಂಬಿಕ ಸಮಸ್ಯೆಗಳು

೨.೫ ವಿವಾಹಿತ ನಿರ್ವಾಹಕಿಯರ ಸಮಸ್ಯೆಗಳು

೨.೬ ಆರೋಗ್ಯದ ಸಮಸ್ಯೆಗಳು

೨.೭ ಬಿಡುವಿನ ಸಮಸ್ಯೆಗಳು

೨.೮ ಮೂಲಭೂತ ಸೌಲಭ್ಯಗಳ ಕೊರತೆ

# ಅಧ್ಯಾಯ ಎರಡು

## ಉದ್ಯೋಗಸ್ಥ ಮಹಿಳೆ ಮತ್ತು ಮಹಿಳಾ ಕಂಡಕ್ಟರ್‌ಗಳು

ನಮ್ಮ ಸಮಾಜದ ಸಾಂಪ್ರದಾಯಿಕ ಮೌಲ್ಯಗಳು ಸ್ತ್ರೀ ಪುರುಷರ ಉದ್ಯೋಗ ನಡುವೆ ಭೇದ, ತಾರತಮ್ಯ ಹಾಗೂ ನಿರ್ಬಂಧಗಳನ್ನು ಹೇರಿವೆ. "ಉದ್ಯೋಗಂ ಪುರುಷ ಲಕ್ಷಣಂ" ಎಂದು ಪುರುಷನಿಗೆ ಹೇಳುವುದರ ಜೊತೆಗೆ ಗೃಹಕೃತ್ಯ ಮಾಡುವುದು ಸ್ತ್ರೀಯರ ಲಕ್ಷಣ ಎಂದು ಹೇಳುತ್ತದೆ. ಉದ್ಯೋಗ ಎನ್ನುವುದು ಸಾರ್ವಜನಿಕ ವಲಯವಾದ್ದರಿಂದ ಅಲ್ಲಿ ಮಹಿಳೆಯರು ಹೆಚ್ಚಾಗಿ ಕಂಡುಬರುವುದಿಲ್ಲ. ಏಕೆಂದರೆ ಹೆಣ್ಣುಮಕ್ಕಳನ್ನು ಕುಟುಂಬದ ನಾಲ್ಕು ಗೋಡೆಗಳ ಮಧ್ಯೆ ಬೆಳೆಸುವುದರಿಂದ ಅವಳು ಮನೆಯಿಂದ ಹೊರಗೆ ದುಡಿಯುವುದನ್ನು ಸಮಾಜ ಒಪ್ಪುವುದಿಲ್ಲ, ಪ್ರೋತ್ಸಾಹಿಸುವುದಿಲ್ಲ.” ಹೆಣ್ಣುಮಕ್ಕಳು ಹೊರಗಡೆ ಹೋಗಬಾರದು. ಹೊರಗಡೆ ಹೋಗುವುದು ಅಪರಾಧ, ಅಲ್ಲದೆ ಅವರು ತುಂಬಾ ದುರ್ಬಲರು ಪರಿಶ್ರಮವಿರುವ ಕೆಲಸಗಳನ್ನು ಅವರು ಮಾಡುವುದಕ್ಕೆ ಸಾಧ್ಯವಿಲ್ಲವೆನ್ನುವುದು ಪುರುಷಪ್ರಧಾನ ವ್ಯವಸ್ಥೆಯ ಪೂರ್ವಗ್ರಹ ಪೀಡಿತ ಗ್ರಹಿಕೆಯಾಗಿತ್ತು. ಆದರೆ "೧೯ನೇ ಶತಮಾನದಲ್ಲಿ ಕೈಗಾರೀಕಿಕರಣ ಉತ್ಪಾದನಾ ಕ್ಷೇತ್ರದಲ್ಲಿ ತೀವ್ರ ಪರಿವರ್ತನೆ ಉಂಟಾಗಿತು. ಕೃಷಿ ಪ್ರಧಾನ ಸಮಾಜವಾಗಿದ್ದ ಭಾರತವನ್ನು ಕೈಗಾರೀಕರಣದಲ್ಲಿ ಗಣನೀಯ ಬದಲಾವಣೆ ಉಂಟಾಗುವುದರ ಜೊತೆಗೆ ಸ್ತ್ರೀಯ ಉದ್ಯೋಗ ಕ್ಷೇತ್ರದಲ್ಲಿಯು ಬದಲಾವಣೆಯಾಯಿತು. ಗೃಹಕಾರ್ಯಗಳಿಗೆ ಮಾತ್ರ ಸೀಮಿತವಾಗಿದ್ದ ಸ್ತ್ರೀಯರು ಕಾರ್ಖಾನೆಗಳಲ್ಲಿ ಹಾಗೂ ಕಛೇರಿಗಳಲ್ಲಿ ಉದ್ಯೋಗ ನಿರತರಾಗಿ ಪುರುಷರಿಗೆ ಸಮನಾಗಿ ದುಡಿಯಲು ಪ್ರಾರಂಭಿಸಿದರು.

ನಗರೀಕರಣದಿಂದಾಗಿ ಅವಿಭಕ್ತ ಕುಟುಂಬಗಳು ಮರೆಯಾಗತೊಡಗಿದ್ದರಿಂದ ಸ್ತ್ರೀಯರಿಗಿದ್ದ ನಿರ್ಬಂಧಗಳು ಸಡಿಲಗೊಳ್ಳಲಾರಂಭಿಸಿದವು. ನಗರ ಪ್ರದೇಶದಲ್ಲಿರುವ ಚಿಕ್ಕ ಕುಟುಂಬಗಳು ಹೆಣ್ಣುಮಕ್ಕಳಿಗೆ ಶಿಕ್ಷಣ, ಉದ್ಯೋಗ ಹಾಗೂ ಸ್ವಾತಂತ್ರ್ಯ ಒದಗಿಸಿದ್ದರಿಂದ ಸ್ತ್ರೀಯರು ಉದ್ಯೋಗದಲ್ಲಿ ತೊಡಗಿಕೊಳ್ಳಲು ಸಹಾಯಕವಾಯಿತು.”[೧]

ಸ್ವಾತಂತ್ರ್ಯ ನಂತರ ನಮ್ಮ ದೇಶದಲ್ಲಿ ಮಹಿಳೆಯರು ಉದ್ಯೋಗದಲ್ಲಿ ತೊಡಗುವವರ ಸಂಖ್ಯೆ ಅಗಾಧವಾಗಿ ಬೆಳೆಯುತ್ತದೆ. ಒಂದು ಕಾಲಕ್ಕೆ ಮನೆಯ ಹೊರಗಡೆ ದುಡಿಯುವುದು ಪ್ರತಿಷ್ಟೆಗೆ ಕುಂದು ತರುವ ಸಂಗತಿಯಾಗಿತ್ತು. ಮನೆಯ ಹೊರಗಡೆ ದುಡಿಯದಿರುವುದು ಪ್ರತಿಷ್ಟೆಯ ವಿಷಯವಾಗಿತ್ತು. ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಮಹಿಳೆಯರು ಮನೆಯ ಹೊರಗೆ ದುಡಿಯುವುದು ಪ್ರತಿಷ್ಟೆಗೆ ಗರಿ ಮೂಡಿಸುವ ಸಂಗತಿಯಾಗಿದೆ.

ಉದ್ಯೋಗದಲ್ಲಿ ಸರಳವಾಗಿ ಎರಡು ವಿಧವನ್ನು ಗುರುತಿಸಬಹುದು. ಬೌದ್ಧಿಕ ಹಾಗೂ ದೈಹಿಕ ಶ್ರಮದಿಂದ ಕೂಡಿದ ಉದ್ಯೋಗ. ಕೆಲವೊಮ್ಮೆ ಈ ಎರಡು ಶ್ರಮದ ಸಮಿಶ್ರ ಉದ್ಯೋಗವು ಉಂಟು. ಓದಿದವರಾದ ಹೆಣ್ಣುಮಕ್ಕಳು ಕಛೇರಿ, ಶಾಲಾ, ಕಾಲೇಜುಗಳಲ್ಲಿ ಖಾಸಗಿ ಸಂಸ್ಥೆಗಳಲ್ಲಿ ಇಂತಿಷ್ಟು ಸಮಯ ಕೆಲಸ ಮಾಡಿ ತಿಂಗಳಿಗೊಮ್ಮೆ ಸಂಬಳ ಪಡೆಯುವುದು ಒಂದು ವರ್ಗವಾದರೆ, ವಿದ್ಯಾವಂತರಲ್ಲದ ಕಾರ್ಖಾನೆಗಳಲ್ಲಿ ದುಡಿಯುವ ಹೆಣ್ಣುಮಕ್ಕಳು ಮುಂಜಾನೆಯಿಂದ ಸಂಜೆಯವರೆಗೂ ಬೀಡಿಸುತ್ತಿ, ಊದುಬತ್ತಿ ಹೊಸೆದು, ಹೂಕಟ್ಟಿ ಊಟ, ಎಲೆ ಹಚ್ಚಿ, ಕೆಲಸ ಮಾಡುವ ಹೆಣ್ಣುಮಕ್ಕಳು, ಮನೆಕಟ್ಟುವ ಕೆಲಸದಲ್ಲಿ ಗಂಡಾಳಿಗೆ ಸಿಮೆಂಟ್ ನೀರನ್ನು ಹೊತ್ತು ತಂದು ದುಡಿಯುವ ಮಹಿಳೆಯರು ಇನ್ನೊಂದು ವರ್ಗ. ಮುಂಜಾನೆ ಐದು ಗಂಟೆಗೆ ಎದ್ದು ರಾತ್ರಿ ೧೧ ಗಂಟೆಯವರೆಗೂ ಮನೆಯಲ್ಲಿ ಅಡಿಗೆ ಕಸ-ಮುಸುರೆ, ಅತಿಥಿ ಸೇವೆ ಹೀಗೆ ದುಡಿಯುವ ಒಬ್ಬ ತಾಯಿಯಾಗಬಹುದು. ಒಬ್ಬ ಹೆಂಡತಿ, ಒಬ್ಬ ಅಕ್ಕ-ತಂಗಿ, ಅತ್ತಿಗೆ, ನಾದಿನಿ ಯಾರಾದರೂ ಆಗಬಹುದು. ಅವರ ೩೬೫ ದಿವಸಗಳ ನಿರಂತರ ದುಡಿಮೆಗೆ ಯಾವ ಪ್ರತಿಫಲವನ್ನು ಕುಟುಂಬದ ಇತರ ಸದಸ್ಯರಿಗೆ ಯಾವ ಸಂಬಳ ಗಿಂಬಳ ಯಾವುದೂ ಇಲ್ಲ, ಆಕೆ ಏನಾದರೂ ತನ್ನ ದುಡಿಮೆಗೆ ಸಂಬಳ ಭತ್ಯೆ ಕೇಳಿದರೆ ಬಹುಶಃ ನಮ್ಮ ದೇಶದ ಆರ್ಥಿಕ ವ್ಯವಸ್ಥೆಯೇ ಏರುಪೇರಾಗಬಹುದು. ಆದರೆ ಈ ಪುರುಷಪ್ರಧಾನ ವ್ಯವಸ್ಥೆ ಮನೆಗೆಲಸ, ಗಂಡ, ಮಕ್ಕಳನ್ನು ಮತ್ತು ಹಿರಿಯರ ಸೇವೆ ಮಾಡುವುದು ಮಹಿಳೆಯರ ಕರ್ತವ್ಯ ಎನ್ನುವ ಮೌಲ್ಯವನ್ನು ಹೇರಿದೆ.

"ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ನಗರ, ಪಟ್ಟಣಗಳೆರಡರಲ್ಲಿಯೂ ಹೆಚ್ಚಳ ಕಂಡುಬರುತ್ತಿದ್ದರೂ, ಸಂಖ್ಯೆಗೆ ಹೋಲಿಸಿದರೆ ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ಇಳಿಮುಖವಾಗಿದೆ. ೧೯೭೧ರಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ಒಟ್ಟು ಮಹಿಳಾ ಉದ್ಯೋಗಿಗಳ ಪ್ರಮಾಣ ಶೇ. ೧೪.೨ ಇದ್ದರೆ, ೧೯೮೮ರಲ್ಲಿ ಶೇ. ೧೯.೭ಕ್ಕೆ ಏರಿತು. ೧೯೯೧ರಲ್ಲಿ ಶೇ. ೨೨.೭ಕ್ಕೇರಿದೆ. ಕರ್ನಾಟಕವನ್ನೇ ತೆಗೆದುಕೊಂಡರೆ ಸರ್ಕಾರಿ ಸೇವೆಯಲ್ಲಿರುವ ಒಟ್ಟು ಮಹಿಳಾ ನೌಕರರ ಪ್ರಮಾಣ ೧೯೯೧ರಲ್ಲಿ ೧೭.೮೭ (ಅಂದರೆ ೭೩ ಲಕ್ಷ)ರಷ್ಟಿದ್ದು. ೧೯೯೫ರಲ್ಲಿ ಅದು ಶೇ. ೨೧.೩೮ಕ್ಕೆ (ಅಂದರೆ ೯೧ ಲಕ್ಷ) ಏರಿಕೆಯಾಗಿದೆ."[೨] ೧೯೮೧ - ೧೯೯೧ರ ೨೦ ವರ್ಷಗಳ ಯೋಜನಾ ಅವಧಿಯನ್ನೇ ತೆಗೆದುಕೊಂಡರೆ ಈ ಅವಧಿಯಲ್ಲಿ ಮಹಿಳಾ ಜನಸಂಖ್ಯೆ ಶೇ. ೫೫ರಷ್ಟು ಮಾತ್ರ ಬಳಕೆಯಾಗಿದೆ. ಆದರೆ ಅವರ ಕಾರ್ಯದಕ್ಷತೆ ಪುರುಷರಿಗಿಂತ ಉತ್ತಮವಾಗಿರುವುದು, ಸಮಾಧಾನಕರ ಸಂಗತಿಯಾದರೂ "ಮಹಿಳೆಯರು ಹೆಚ್ಚಾಗಿ ಶಿಕ್ಷಕಿ, ದಾದಿಯಂತಹ

ಸೇವಾವಲಯಗಳಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುತ್ತಿದ್ದಾರೆ. ಕರ್ನಾಟಕದ ಸರ್ಕಾರಿ ನೌಕರಿಯಲ್ಲಿರುವ ಒಟ್ಟು ಮಹಿಳೆಯರಲ್ಲಿ ಅರ್ಧಕ್ಕಿಂತ ಹೆಚ್ಚು ಮಹಿಳೆಯರು ಶಿಕ್ಷಣ ಮತ್ತು ಆರೋಗ್ಯ ಇಲಾಖೆಗಳಲ್ಲಿ ಇರುವುದು ಕಂಡುಬಂದಿದೆ. ಏಕೆಂದರೆ ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಸಮಾಜದಲ್ಲಿ ಸಿಕ್ಕ ಗೌರವ ಬೇರೆ ಬೇರೆ ಇಲಾಖೆಗಳಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಸಿಗುವುದಿಲ್ಲ. ಆದರೂ ಮಹಿಳೆಯರು ಇತ್ತೀಚಿನ ದಿನಗಳಲ್ಲಿ ಸಾರ್ವಜನಿಕ ವಲಯಗಳಾದ ಕಂಡಕ್ಟರ್, ಪೋಲೀಸ್, ಬ್ಯಾಂಕ್, ಜಾಹಿರಾತು, ವಾಣಿಜ್ಯ ಕಲೆ, ಉಡುಪು ತಯಾರಿಕೆ, ಉಡುಪು ವಿನ್ಯಾಸ, ರೇಡಿಯೋ, ದೂರದರ್ಶನ, ಸಿನಿಮಾ, ಕಂಪ್ಯೂಟರ್ ಮುಂತಾದ ಕ್ಷೇತ್ರಗಳಲ್ಲಿ ಮಹಿಳೆಯರ ಸಂಖ್ಯೆ ಅಧಿಕವಾಗುತ್ತಿದೆ.

ಹೊರಗಡೆ ಕೆಲಸಕ್ಕೆ ಕಳುಹಿಸುವುದರಿಂದ ಮಹಿಳೆಯರಲ್ಲಿ ಆತ್ಮವಿಶ್ವಾಸ ಮೂಡುತ್ತದೆ. ಆದರೆ ಸಮಾಜ ಹಾಗೂ ಕುಟುಂಬದ ಸಂಕೀರ್ಣ ಪರಿಸ್ಥಿತಿಗಳ ಕಾರಣ ಅನುಮಾನದ ದೃಷ್ಟಿಗಳನ್ನು ಎದುರಿಸುವುದೆ ಅಲ್ಲದೇ ಕೀಳು ಹಾಗೂ ಕೆಟ್ಟ ಮಾತುಗಳನ್ನು ಕೇಳಬೇಕಾಗಿದೆ. ಅವಿವಾಹಿತ ಮಗಳ ಆದಾಯವನ್ನು ಉಪಯೋಗಿಸಿಕೊಳ್ಳುವುದು ನಾಚಿಕೆಗೇಡಿನ ಕಾರ್ಯ ಎಂದು ಅನೇಕ ತಂದೆತಾಯಂದಿರು ಇಂದಿಗೂ ಭಾವಿಸುತ್ತಿದ್ದಾರೆ. ಭಾರತೀಯ ಸಮಾಜದಲ್ಲಿ ಮಗನ ಸಂಪಾದನೆಯನ್ನು ಕುಟುಂಬ ಆಧರಿಸಿರುವುದನ್ನು ಹೆಮ್ಮೆಯ ವಿಷಯವೆಂದು ಮಗಳ ಸಂಪಾದನೆಯಿಂದ ಜೀವನ ನಡೆಸುವುದು ಅಪಮಾನಕರವೆಂದು ಭಾವಿಸಲಾಗಿದೆ. ಅದಾಗ್ಯೂ ನಮ್ಮಲ್ಲಿ ಅನೇಕ ಮಹಿಳಾ ಕಂಡಕ್ಟರ್‌ಗಳು ತಮ್ಮ ಕುಟುಂಬದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಲ್ಲಿ, ತಂದೆ ತಾಯಿಯರನ್ನು ಸಂರಕ್ಷಣೆ ಮಾಡುವಲ್ಲಿ ಹಾಗೂ ತಮ್ಮ, ತಂಗಿಯರ ಭವಿಷ್ಯಕ್ಕಾಗಿ ತಾವು ಮಧುವೆಯಾಗದೇ ನೌಕರಿಯಲ್ಲಿದ್ದು ಜೀವನ ನಡೆಸುವ ತೀರ್ಮಾನವನ್ನು ಕೈಗೊಂಡಿದ್ದಾರೆ.

ಮನೆಯಲ್ಲಿ ಕುಳಿತಿದ್ದರೆ ಆರ್ಥಿಕ ಸಮಸ್ಯೆಯೊಂದೇ ತೊಂದರೆಯಾಗುತ್ತದೆ. ಆದರೆ ಮನೆಯಿಂದ ಹೊರಗೆ ಬಂದರೇ ಆಕೆ ಅನೇಕ ಸಮಸ್ಯೆಗಳನ್ನು ಎದುರಿಸಲು ಅವುಗಳ ಜೊತೆ ಹೋರಾಡಲು ಸಿದ್ಧಳಾಗಬೇಕಾಗುತ್ತವೆ. ನಮ್ಮ ಸಮಾಜ ಹೇಳಿ ಕೇಳಿ ಪುರುಷಪ್ರಧಾನ ಸಮಾಜ ಒಮ್ಮೆ ಹೆಣ್ಣು ಉದ್ಯೋಗಕ್ಕೆ ಹೊರಗೆ ಅದರಲ್ಲೂ ಸಾರ್ವಜನಿಕ ವಲಯದಲ್ಲಿ ಕಾಲಿಟ್ಟ ಮಹಿಳಾ ಕಂಡಕ್ಟರ್‌ಗಳ ಮೊದಲ ಸಮಸ್ಯೆ. ಈ ಪುರುಷ ವರ್ಗದವರೊಡನೆ ಸ್ಪರ್ಧಿಸಬೇಕಾದುದು ಅದರಲ್ಲಿ ಆಕೆಗೆ ಎಂದು ಜಯವೇ ಸೋಲುವವರು ತೀರಾ ಕಡಿಮೆ. ಆಕೆಯ ಜಯವೇ ಜೊತೆಯಲ್ಲಿ ಕೆಲಸ ಮಾಡುವ ಪುರುಷರಿಗೆ ಇದು ಒಂದು ನುಂಗಲಾರದ ತುತ್ತು. ಹೆಣ್ಣಿಗೆ ಅವಳು ಹೊರಗಡೆ ದುಡಿಯಲಿ ಅಥವಾ ಮನೆಯೊಳಗಿನ ದುಡಿಮೆಯಲ್ಲಿ ಅವಳಿಗೆ ಪ್ರಾಕೃತಿವಾಗಿ, ದೈಹಿಕವಾಗಿ ಕೆಲವು ಸಮಸ್ಯೆಗಳು ಅಂದರೆ ಋತುಸ್ರಾವದ ಸಂದರ್ಭದಲ್ಲಿ ವಾರಕ್ಕಿಂತ ಮುಂಚೆ ಅವಳು ಮಾನಸಿಕವಾಗಿ ಖಿನ್ನತೆಗೆ ಒಳಗಾಗುತ್ತಾಳೆ. ಹೊಟ್ಟೆನೋವು, ಕೈಕಾಲು ಹರಿತಾ, ಸಂತಾನೋತ್ಪತ್ತಿ ಸಮಯದಲ್ಲಿ ಮಗುವಿನ ಲಾಲನೆ ಪಾಲನೆ, ಈ ಸಮಸ್ಯೆಗಳನ್ನು ಅವಳು ಹೇಗೋ ನಿವಾರಿಸಿಕೊಳ್ಳಬಲ್ಲಳು. ಆದರೆ ಪುರುಷರ ಕಡೆಯಿಂದ ಉದ್ದೇಶಪೂರ್ವಕವಾಗಿ ಬರುವ

ಸಮಸ್ಯೆಗಳನ್ನು ಎದುರಿಸುವುದಕ್ಕಾಗಿಯೇ ತನ್ನ ಪ್ರತಿಭೆ, ಶಕ್ತಿ, ಜಾಣ್ಮೆ, ವಿದ್ಯೆ, ಸಮಯವನ್ನು ಶೇ. ೩೦-೪೦ ಭಾಗ ಪುರುಷರಿಂದ ಉಂಟಾಗುತ್ತಿರುವ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಹೋರಾಡಿದ್ದರೆ ಇನ್ನೂ ೫೦ ಭಾಗ ತನ್ನ ಉದ್ಯೋಗಕ್ಕೆ ಮೀಸಲಿಡಲಾಗಿದೆ. ಒಮ್ಮೊಮ್ಮೆ ರಾಜಿ ಮಾಡಿಕೊಳ್ಳುವಲ್ಲಿ ಆಕೆ ವ್ಯಯಮಾಡಬೇಕಾಗಿದೆ.

ಪುರುಷ ಮೇಲಾಧಿಕಾರಿಗಳಿಂದ, ಪುರುಷ ಸಹೋದ್ಯೋಗಿಗಳಿಂದ, ಪ್ರಯಾಣಿಕರು ಕೆಲಸದ ಸ್ಥಳದಲ್ಲಿ ಅವಿವಾಹಿತ ಮಹಿಳಾ ಕಂಡಕ್ಟರ್‌ಗಳನ್ನು ನೋಡುವ ದೃಷ್ಟಿಯೇ ಬೇರೆ. ವಿವಾಹಿತ ಮಹಿಳಾ ಕಂಡಕ್ಟರ್‌ಗಳನ್ನು ನಡೆಸಿಕೊಳ್ಳುವ ರೀತಿಯೇ ಬೇರೆ. ಆದರೆ ಆ ಇಬ್ಬರು ಸ್ತ್ರೀಯರಿಗೂ ಬೇರೆ ಬೇರೆ ರೀತಿಯ ಸಮಸ್ಯೆಗಳನ್ನು ತಂದೊಡ್ಡುವುದರಲ್ಲಿ ಅವರು ನಿಸ್ಸೀಮರು.

## ೨.೧ ನಿರ್ವಾಹಕಿಯರ ಬಗೆಗಿನ ಸಾಮಾಜಿಕ ದೃಷ್ಟಿ :

ಸ್ತ್ರೀ-ಪುರುಷರಲ್ಲಿ ಶ್ರಮ ವಿಭಜನೆಯ ನೆಪದಲ್ಲಿ ಪ್ರಾರಂಭವಾದ ಶ್ರೇಣೀಕರಣದ ವ್ಯಾಪ್ತಿ, ಕಾಲಾನುಕ್ರಮದಲ್ಲಿ ಕಲ್ಪನೆ ಮಾಡಿಕೊಳ್ಳುವುದಕ್ಕೂ ಅಸಾಧ್ಯವಾಗದ ರೀತಿಯಲ್ಲಿ, ಸ್ತ್ರೀ ಪುರುಷರ ಎರಡು ಭಿನ್ನ ಲೋಕಗಳೇ ಸೃಷ್ಟಿಗೊಂಡಿವೆ. ಸ್ತ್ರೀ-ಪುರುಷರ ನಡುವಣ ಜೈವಿಕ ವ್ಯತ್ಯಾಸಗಳು ಒಂದು ವಾಸ್ತವ. ಸ್ತ್ರೀ-ಪುರುಷರು ಜೈವಿಕ ಕಾರಣದಿಂದ ಸ್ತ್ರೀಯರನ್ನು ದುರ್ಬಲರು ಪುರುಷರು ಮಾಡುವಂತಹ ಕೆಲಸಗಳು ಮಹಿಳೆಯರಿಗೆ ಮಾಡುವುದಕ್ಕೆ ಸಾಧ್ಯವಿಲ್ಲ. ಅವರು ಏನಿದ್ದರು. ವಿವಾಹ, ತಾಯ್ತನ, ಮಕ್ಕಳ ಲಾಲನೆ ಪಾಲನೆ ಈ ಕೆಲಸಗಳಿಗೆ ಮಾತ್ರ ಅವರು ಸೂಕ್ತ ಎನ್ನುವುದು ಪುರುಷಪ್ರಧಾನ ಸಮಾಜದ ಗ್ರಹಿಕೆಯಾಗಿತ್ತು." ಆದರೆ ೧೯ನೇ ಶತಮಾನದಲ್ಲಿ ಪ್ರಾರಂಭವಾದ ಕೈಗಾರೀಕರಣ ಮತ್ತು ಜಾಗತೀಕರಣದಿಂದ ಸ್ತ್ರೀಯರ ಉದ್ಯೋಗದಲ್ಲಿ ತೀವ್ರವಾದ ಪರಿಣಾಮ ಉಂಟಾಯಿತು. ಆಗ ಮಹಿಳೆಯರು ಶಿಕ್ಷಕಿ, ದಾದಿಯಂತಹ ಕೆಲಸಗಳನ್ನು ಮಾತ್ರ ಮಾಡುತ್ತಿದ್ದರು. ಈ ವಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರನ್ನು ಸಮಾಜದಲ್ಲಿ ತುಂಬಾ ಗೌರವದಿಂದ ಕಾಣುತ್ತಿತ್ತು. ಏಕೆಂದರೆ ಈ ಇಲಾಖೆಗಳು ಸೇವಾ ವಲಯಗಳಾಗಿರುವುದರಿಂದ ಮಹಿಳೆಯ ೪ ಗೋಡೆಗಳ ಮಧ್ಯೆ ಇರುವುದನ್ನು ಮಾತ್ರ ಒಪ್ಪಿಕೊಳ್ಳುವ ಅವರ ಜೀವನ ಇರುವುದೇ ಇನ್ನೊಬ್ಬರ ಸೇವೆಗಾಗಿ ಎಂಬ ನಂಬಿಕೆಯಿಂದ ಹೆಣ್ಣುಮಕ್ಕಳನ್ನು ಈ ಕ್ಷೇತ್ರದಲ್ಲಿ ಮಾತ್ರ ಕೆಲಸ ಮಾಡುವ ಮಹಿಳೆಯನ್ನು ಗೌರವದಿಂದ ಕಾಣುತ್ತಿತ್ತು. ಆದರೆ ೨೧ನೇ ಶತಮಾನದಲ್ಲಿ ಮಹಿಳೆಯರು ಸಾರ್ವಜನಿಕ ವಲಯಗಳಲ್ಲಿ ತಮ್ಮ ಹೆಜ್ಜೆಯನ್ನು ಇಡುತ್ತಿದ್ದಾರೆ. ಕಂಡಕ್ಟರ್, ಪೊಲೀಸ್ ಹುದ್ದೆಯಲ್ಲಿರುವ ಮಹಿಳೆಯರಿಗೆ ಶಿಕ್ಷಣ, ಆರೋಗ್ಯ ಇಲಾಖೆಗಳಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಸಿಗುವಷ್ಟು ಗೌರವ, ಸ್ಥಾನಮಾನ ಸಿಗುತ್ತಿಲ್ಲವಾದ್ದರಿಂದ ಈ ಹುದ್ದೆಗೆ ಹೆಣ್ಣುಮಕ್ಕಳನ್ನು ಕಳುಹಿಸುವುದಕ್ಕ ಹಿಂಜರಿಯುತ್ತಿದ್ದರು. ಆದರೂ ಕೆಲವು ಮಹಿಳೆಯರು ಕಂಡಕ್ಟರ್ ಕೆಲಸಕ್ಕೆ ಬಂದಿದ್ದಾರೆ.

ಕಂಡಕ್ಟರ್ ಕೆಲಸ ಪುರುಷರಿಗೆ ಮಾತ್ರ ಮಾಡುವುದಕ್ಕೆ ಸಾಧ್ಯ. "ಬೂಟು ಸೀಟಿ ಹುಡುಗರಿಗೆ ಮಾತ್ರ ಅಂದುಕೊಂಡಿದ್ದರು. ಆದರೆ ಈಗ ಮಹಿಳೆಯರು ಖಾಕಿ ಹಾಕಿ ಕಂಡಕ್ಟರ್ ಆಗಿದ್ದಾರೆ. ಸೀಟಿ ಊದುತ್ತಾರೆ. ಚಲಿಸುತ್ತಿರುವ ಬಸ್‌ನಲ್ಲಿ ಭರಭರ ಓಡಾಡುತ್ತ ಸರಸರ ದುಡ್ಡು ತೆಗೆದುಕೊಂಡು ಟಿಕೆಟ್ ಹರಿದು ಕೊಟ್ಟು ಜನ ಜಂಗುಳಿಯನ್ನು ಸುಧಾರಿಸುತ್ತಾ ತರಲೆ ಮಾಡುವವರನ್ನು ದಬಾಯಿಸಿ ನಿಂತೇ ಕೆಲಸ ಮಾಡುತ್ತಿದ್ದಾರೆ.

ಕೆ.ಎಸ್.ಆರ್.ಟಿ.ಸಿ, ಬಿಎಂಟಿಸಿ ಎರಡರಲ್ಲಿಯು ಕಂಡಕ್ಟರಗಳಾಗಿ ಕೆಲಸ ನಿರ್ವಹಿಸುತ್ತಿರುವವರು ಹಳ್ಳಿಗಳಿಂದ ಬಂದಂತಹ ಮಹಿಳೆಯರೇ ಆದರೆ ಅವರು ಎಂದು ಕಂಡಕ್ಟರ್ ಆಗುತ್ತೇನೆಂಬ ಕನಸು ಕಂಡವರಲ್ಲ".[3] ಹಳ್ಳಿಯಲ್ಲಿ ಗಂಡಸರೊಂದಿಗೆ ಮಾರು ದೂರ ನಿಂತು ಮಾತನಾಡುತ್ತಿದ್ದವರು ಈಗ ಜನ ಉಪ್ಪರಿಗೆಯಾದ ಬಸ್ಸಿನಲ್ಲಿ ಬರಬರನೇ ಓಡಾಡುತ್ತಾ ಟಿಕೆಟ್ ಕೇಳದೆ ಕೈಕಟ್ಟಿ ಕುಂತವರಿಗೆ ಗದರಿಸುತ್ತಾ ದಬಾಯಿಸುತ್ತಾ ತಿಳುವಳಿಕೆಯನ್ನು ಹೇಳುತ್ತಾರೆ. ಕಂಡಕ್ಟರ್ ಆಗಲು ವಿದ್ಯಾರ್ಹತೆ ಪಿಯುಸಿ ಆದರೆ ಇದು ಬರಿ ಪಿಯುಸಿ ಮಾಡಿದವರಷ್ಟೇ ಕಂಡಕ್ಟರ್ ಕೆಲಸದಲ್ಲಿ ಇಲ್ಲ ಬಿ.ಎ, ಡಿಎಡ್ ಮಾಡಿದವರು ಇದ್ದಾರೆ. ಈ ಕ್ಷೇತ್ರದಲ್ಲೇ ಅವರು ಮುಂದೆ ಸಿ.ಎ. ಆಗುವ ಕನಸನ್ನು ಕಾಣುವ ಹುಡುಗಿಯರಿದ್ದಾರೆ. ಸಾಮಾನ್ಯವಾಗಿ ಹಳ್ಳೀಲಿ ಹುಡುಗಿ ಪಿಯು ಮುಗಿಸಿದರೆ ಮದುವೆ ಮಾಡಿಬಿಡುತ್ತಾರೆ. ಏಕೆಂದರೆ ದೊಡ್ಡವಳಾಗಿ ತುಂಬಾ ದಿನ ಮನೆಯಲ್ಲಿ ಇದ್ದರೆ ಅಕ್ಕ-ಪಕ್ಕದವರು, ಸಂಬಂಧಿಕರು ಈಕೆ ಋತುಮತಿಯಾಗಿ ಇಷ್ಟು ವರ್ಷವಾದರೂ ಇನ್ನೂ ಮದುವೆ ಮಾಡಿಲ್ಲ ಎಂದು ವ್ಯಂಗ್ಯವಾಗಿ ಮಾತನಾಡಿಕೊಳ್ಳುತ್ತಾರೆ ಎಂಬ ಆತಂಕದಿಂದ 'ವಯಸ್ಸಿಗೆ ಬಂದ ಹೆಣ್ಣುಮಕ್ಕಳನ್ನು ಮನೆಯಲ್ಲಿಟ್ಟುಕೊಳ್ಳುವುದಕ್ಕೆ ಹಿಂಜರಿಯುತ್ತಾರೆ. ಗಾದೆ ಮಾತಿನಂತೆ ಇಟ್ಟುಕೊಳ್ಳುವುದು ಒಂದೇ ಸೆರಗಿನಲ್ಲಿ ಕೆಂಡ ಇಟ್ಟುಕೊಳ್ಳುವುದು ಒಂದೇ' ಎಂಬ ನಂಬಿಕೆಯಿಂದ ಅಲ್ಲದೆ ಹೆಚ್ಚು ಓದಿಸಿದರೆ ತಮಗೆ ಎದುರು ಮಾತನಾಡುತ್ತಾರೆ. ಈ ರೀತಿಯಾಗಿ ತಿಳಿದ ಗ್ರಾಮೀಣ ಪ್ರದೇಶದವರು ತಮ್ಮ ಮನೆ ಹೆಣ್ಣುಮಕ್ಕಳು ಮನೆಬಿಟ್ಟು ಹೊರಗೆ ಕಳಿಸುವುದನ್ನು ಹಿಂದೇಟು ಹಾಕುತ್ತಾರೆ. ಅಷ್ಟೇ ಅಲ್ಲದೆ ಮದುವೆ ಮಾಡುವಾಗ ಅವಳಿಗೆ ಹೆಚ್ಚು ಓದಿದ ಗಂಡನ್ನು ಹುಡುಕಬೇಕಾಗುತ್ತದೆ. ಅದಕ್ಕಾಗಿ ಹೆಣ್ಣುಮಕ್ಕಳನ್ನು ಹೆಚ್ಚು ಓದಿಸದೆ ಎಸ್.ಎಸ್.ಎಲ್.ಸಿ, ಪಿಯುಸಿ ಮುಗಿಸಿದ ತಕ್ಷಣ ಮದುವೆ ಮಾಡಿಬಿಡುತ್ತಾರೆ. ಓದುವ ಆಸೆ ಇದ್ದರೂ ಮನೆಯವರ ಒತ್ತಡಕ್ಕೆ ಮಣಿದು ಮನೆಯ ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ದೃಷ್ಟಿಯಿಂದ ಓದುವ ವಯಸ್ಸಿನಲ್ಲಿ ದುಡಿಯಬೇಕಾದಂತಹ ಅನಿವಾರ್ಯತೆ ಎದುರಾಗಿವೆ.

ಹೆಚ್ಚು ಓದಿದ ಹೆಣ್ಣುಮಕ್ಕಳು ಬೇರೆ ದೊಡ್ಡ ದೊಡ್ಡ ಉದ್ಯೋಗ ಕ್ಷೇತ್ರದಲ್ಲಿ ದುಡಿದೇ ದುಡಿಯುತ್ತಾರೆ. ಹೆಚ್ಚು ಓದದವರು ಅಡುಗೆ ಕಲಿತು ಗಂಡನ ಮನೆ ದಾರಿ ಹಿಡಿಯಬೇಕಿತ್ತು. ಆದರೆ ಈಗ ಕಡಿಮೆ ಓದಿದವರು ಕೂಡ ಮನೆಯಿಂದ ಹೊರಬಂದು ತಮ್ಮ ಕಾಲ ಮೇಲೆ ನಿಲ್ಲಬಹುದು ಎಂಬುದನ್ನು ಮಹಿಳಾ ಕಂಡಕ್ಟರ್‌ಗಳು ತೋರಿಸಿಕೊಟ್ಟಿದ್ದಾರೆ.

"ತೋಳಿಗೆ ಚರ್ಮದ ಚೀಲ, ಕೊರಳಲ್ಲಿ ಮಿಶಿನ್ ಹಿಡಿದುಕೊಂಡು ಬಸ್‌ನಲ್ಲಿ ರಶ್ ಇರುವಾಗ ಎಲ್ಲರ ಮಧ್ಯೆ ನುಗ್ಗಿ ಯಾವುದೇ ಭಯವಿಲ್ಲದೆ ಕೆಲಸ ಮಾಡುವುದನ್ನು ನೋಡಿ ಜನರು ಆಶ್ಚರ್ಯಪಡುತ್ತಾರೆ." ಮರಹತ್ತುವಂತಹ ಕಠಿಣ ಕೆಲಸಗಳಿಗೆ ಸ್ತ್ರೀಯರ ದೇಹ ಪ್ರಕೃತಿಗೆ ಒಗ್ಗುವುದಿಲ್ಲ ಎಂಬುದು ಪುರುಷಪ್ರಧಾನ ಸಮಾಜದ ನಂಬಿಕೆಯಾಗಿದೆ. ಆದರೆ ಇಂದು ಮಹಿಳಾ ಕಂಡಕ್ಟರ್‌ಗಳು ಈ ನಂಬಿಕೆಯನ್ನು ಸುಳ್ಳು ಮಾಡಿದ್ದಾರೆ. ಪ್ರಯಾಣಿಕರು ಬಸ್‌ಗಳ ಮೇಲೆ ಕೂತಾಗ ಬಸ್ ಮೇಲೆ ಏರಿ ಟಿಕೇಟ್ ತೆಗೆದುಕೊಳ್ಳುತ್ತಾರೆ. ಈ ಎಲ್ಲಾ ಕೆಲಸವನ್ನು ಲವಲವಿಕೆಯಿಂದ ಮಾಡುತ್ತಿದ್ದರು. ಕುಟುಂಬದಲ್ಲಿ ಮತ್ತು ಉದ್ಯೋಗ ಸ್ಥಳದಲ್ಲಿ ಅನೇಕ ಸಮಸ್ಯೆ ಮತ್ತು ಆರೋಗ್ಯ ಸಮಸ್ಯೆ, ಮಾನಸಿಕ ಸಮಸ್ಯೆ, ವೈವಾಹಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ.

### ೨.೨ ಉದ್ಯೋಗದ ಆಯ್ಕೆಗೆ ಇರುವ ಕಾರಣಗಳು :

ಹೆಣ್ಣುಮಕ್ಕಳು ಮನೆಯಲ್ಲೆ ಇರಲಿಲ್ಲ. ಹೊರಗೆ ಇರಲಿ ನಿರಂತರವಾಗಿ ದುಡಿಯುವವರಾಗಿದ್ದಾರೆ. ಎಂತಹ ಪರಿಶ್ರಮವಿರುವ ಕೆಲಸವನ್ನು ಮಾಡಬಲ್ಲಳು. ಆಕೆ ಕೂತು ಉಣ್ಣುವ ವ್ಯಕ್ತಿಯಲ್ಲ. ಆದುದರಿಂದ ಇದು ಸ್ತ್ರೀ ಸಮಾಜಕ್ಕೆ ಒಂದು ಹೆಮ್ಮೆಯ ವಿಷಯ. ಮಹಿಳಾ ಕಂಡಕ್ಟರ್‌ಗಳು ಅನೇಕ ಕಾರಣಗಳಿಂದ ಉದ್ಯೋಗ ಹರಸಿ ಮನೆಯಿಂದ ಹೊರಬಂದು ದುಡಿಯಲು ಪ್ರಾರಂಭಿಸಿದ್ದಾರೆ.

೧. ಕ್ಷಣ ಕ್ಷಣಕ್ಕೂ ಏರುತ್ತಿರುವ ಬೆಲೆಯಲ್ಲಿ ಒಬ್ಬರ ದುಡಿಮೆಯಿಂದ ಜೀವನ ನಡೆಸಲು ಕಠಿಣವಾಗಿರುವುದರಿಂದ ಈ ಉದ್ಯೋಗವನ್ನು ಹುಡುಕಿಕೊಂಡು ಬರುತ್ತಾರೆ.

೨. ತನ್ನ ವರಮಾನದಿಂದ ಕುಟುಂಬದಲ್ಲಿ ಒಂದು ಸ್ಥಾನ ಪಡೆಯಬಹುದೆಂಬ ಅಭಿಲಾಷೆಯಿಂದ.

೩. ಕಲಿತ ವಿದ್ಯೆ ವ್ಯರ್ಥವಾಗದೆ ಸಮಾಜ ಸೇವೆಗೆ ಮೀಸಲಾಗಲಿ.

೪. ಆರ್ಥಿಕ ಭದ್ರತೆ, ಸ್ವತಂತ್ರ ದೊರೆಯಲಿ.

೫. ಓದುವ ಸಾಮರ್ಥ್ಯವಿದ್ದು, ಒಳ್ಳೆಯ ಅಂಕಗಳಿದ್ದರೂ ಅವರ ಬುದ್ಧಿಶಕ್ತಿ, ಚಾಣ್ಮೆ, ಜ್ಞಾನವನ್ನು ವಿಸ್ತರಿಸಿಕೊಳ್ಳಲು ಅವಕಾಶ ಇಲ್ಲದಕ್ಕಾಗಿ.

೬. ಮಹಿಳೆಯರು ಕೂಡ ಪುರುಷರಿಗೆ ಸಮನಾಗಿ ಎಂತಹ ಕಷ್ಟದ ಕೆಲಸವನ್ನು ಸಹ ಮಾಡಬಲ್ಲವು ಎನ್ನುವ ಆತ್ಮವಿಶ್ವಾಸದಿಂದ.

೭. ತಂದೆ-ಗಂಡನನ್ನು ಕಳೆದುಕೊಂಡು ತಬ್ಬಲಿಯಾದ ಹೆಣ್ಣುಮಕ್ಕಳಿಗೆ ಈ ಉದ್ಯೋಗ ಬಾಳ ಬುತ್ತಿಯಾಗುತ್ತಿದೆ.

೮. ಬಡತನ.

## ೨.೩ ಮಹಿಳಾ ಕಂಡಕ್ಟರ್‌ಗಳು ಎದುರಿಸುತ್ತಿರುವ ಸಮಸ್ಯೆಗಳು :

ಆದಿಕಾಲದಿಂದಲೂ ನಮ್ಮಲ್ಲಿ ಮಹಿಳೆಗೆ ಒಂದು ನೆಲೆಯಲ್ಲಿ ಗೌರವಯುತ ಸ್ಥಾನವಿದೆ. ಭಾರತೀಯ ನಾರಿಯರ ಸ್ಥಾನಮಾನಕ್ಕೂ ಜಗತ್ತಿನ ಇತರೆ ದೇಶಗಳ ನಾರಿಯರ ಸ್ಥಾನಮಾನಕ್ಕೂ ಇರುವ ವ್ಯತ್ಯಾಸ ಗಣನೀಯವಾಗಿದೆ. ಜಗತ್ತಿನಲ್ಲಿ ಸ್ತ್ರೀತ್ವವನ್ನು ದೈವತ್ವಕ್ಕೆ ಏರಿಸಿದ ಕೀರ್ತಿ ಮಾತ್ರ ನಮ್ಮ ದೇಶಕ್ಕೆ ಇದೆ. 'ಮಾತೃ ದೇವೋಭವಾ' ಎಂಬ ವಾಕ್ಯವೇ ಇದಕ್ಕೆ ಸಾಕ್ಷಿಯಾಗಿದೆ. ಎಂದಿನಿಂದಲೂ ಮಹಿಳೆ ತನ್ನ ಗೃಹಸ್ಥ ಜೀವನದ ಜೊತೆಗೆ ಉಳಿದ ಎಲ್ಲಾ ರಂಗಗಳಲ್ಲಿಯೂ ಅವಿರಿತವಾಗಿ ದುಡಿತಯುತ್ತ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡಿದ್ದಾಳೆ. ಇಂದು ರಾಜಕೀಯವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಸಾಂಸಾರಿಕವಾಗಿ, ವೈಜ್ಞಾನಿಕವಾಗಿ, ಬೌದ್ಧಿಕವಾಗಿ ಮತ್ತು ನೈತಿಕವಾಗಿ ಯಾವುದರಲ್ಲಿ ತಾನು ಅಬಲೆಯಲ್ಲ ಸಬಲೆ ಎನ್ನುವುದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ ಎಂಬುದು ಹುಬ್ಬೇರಿಸುವ ಸಂಗತಿಯಾದರೆ ಪ್ರಸ್ತುತ ದಿನಗಳಲ್ಲಿ ಮಹಿಳೆ ಎಲ್ಲಾ ಕಡೆಗಳಲ್ಲಿ ಲೈಂಗಿಕ ಕಿರುಕುಳ ಅನುಭವಿಸುತ್ತಿದ್ದಾಳೆ.

ಮಹಿಳಾ ಕಂಡಕ್ಟರ್‌ಗಳ ಮೇಲೆ ಜರುಗುತ್ತಿರುವ ಸೌಮ್ಯ ಸ್ವರೂಪದ್ದೆಂದು ಕಂಡುಬರುವ ಆದರೆ ಅದನ್ನನುಭವಿಸುವ ಮಹಿಳಾ ಕಂಡಕ್ಟರ್‌ಗಳನ್ನು ತೀವ್ರ ಸ್ವರೂಪದ ಮಾನಸಿಕ ಹಿಂಸೆಗೆ ಈಡುಮಾಡುವ ವಿಶೇಷ ಬಗೆಯ ದೌರ್ಜನ್ಯವೆಂದರೆ ಲೈಂಗಿಕ ಕಿರುಕುಳ. ಇಂತಹ ದೌರ್ಜನ್ಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಒಳಗಾಗುವವರೇ ಸಾರ್ವಜನಿಕ ವಲಯಗಳಲ್ಲಿ ದುಡಿಯುವ ಮಹಿಳಾ ಕಂಡಕ್ಟರ್‌ಗಳು ಎಂದರೆ ತಪ್ಪಾಗಲಾರದು. ತನ್ನ ಉದ್ಯೋಗ ಸ್ಥಳದಲ್ಲಿ ಪುರುಷ ಮೇಲಾಧಿಕಾರಿಗಳಿಂದ ಸಹೊದ್ಯೋಗಿಗಳಿಂದ, ಪ್ರಯಾಣಿಕರಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗಿದ್ದಾರೆ.

### ಅ. ಪ್ರಯಾಣಿಕರಿಂದ ಲೈಂಗಿಕ ಕಿರುಕುಳ :

ಕೆ.ಎಸ್.ಆರ್.ಟಿ.ಸಿ. ಸಾರ್ವಜನಿಕ ವಲಯವಾದ್ದರಿಂದ ಸಾರ್ವಜನಿಕರ ಮಧ್ಯೆನೇ ನಿಂತುಕೊಂಡು ಕೆಲಸ ಮಾಡಬೇಕಾಗುತ್ತದೆ. ಬಸ್‌ನಲ್ಲಿ ಎಲ್ಲಾ ಥರದ ಜನ ಬರ್‍ತಾರೆ. ಕೆಲವು ಪ್ರಯಾಣಿಕರು ಕೆಲಸ ಮಾಡುವುದಕ್ಕೆ ಸಹಕಾರ ನೀಡುತ್ತಾರೆ. ಕೆಲವರು ಪ್ರಯಾಣಿಕರು ಮಾಡುವುದಿಲ್ಲ. "ಟಿಕೇಟ್ ಕೊಟ್ಟು ಚಿಲ್ರೆ ವಾಪಾಸ್ ಕೊಡುವುದಕ್ಕೆ ಹೋದರೆ ಬೇಡಾ ಚೆನ್ನಾಗಿ ಇದ್ದೀಯಾ ಇಟ್‌ಕೋ" ಎಂದು ಹೇಳುವಾಗ ಅವಳಿಗೆ ಆಗುವಂತಹ ನೋವನ್ನು ಸಹಿಸಿಕೊಂಡು ಚಿಲ್ಲರೆಯನ್ನು ಅವನ ಕೈಯಲ್ಲಿ ಕೊಟ್ಟು, ಮತ್ತೆ ಟಿಕೇಟ್ ಕೊಡುವ ತನ್ನ ಕೆಲಸದಲ್ಲಿ ನಿರತರಾಗುತ್ತಾರೆ.

ಬಸ್‌ನ ತುಂಬಾ ಜನ ತುಂಬಿಕೊಂಡಾಗ ಹೆಚ್ಚು ಕಡಿಮೆ ತಗುಲಿಗೊಂಡೆ ನಡೆಯಬೇಕಾದಾಗ ಅಂತಹ ಸಮಯದಲ್ಲಿ ಮೈಮುಟ್ಟುವ ಚಾನ್ಸು ತೆಗೆದುಕೊಳ್ಳುವ ಗಂಡು ಪ್ರಾಣಿ ಇಲ್ಲವೆಂದರೆ ತಪ್ಪಾಗಲಿಕ್ಕಿಲ್ಲ. ಬೇಕೂ ಅಂತ ಕಾಲು ಅಡ್ಡಹಾಕುವುದು, ನಂತರ ಗೊತ್ತಾಗಲಿಲ್ಲ ಅಂತ ಹೇಳುವುದು. ಚಿಲ್ಲರೆಯಿದ್ದು ಕೊಡದೆ ಸತಾಯಿಸುವುದು. ಜಾಗವಿದ್ದರೂ ಅಂಟಿಕೊಂಡು ನಿಲ್ಲುವುದು, ಅಸಹ್ಯವಾಗಿ

ಮೈ ತಗುಲಿಸುವುದು. ಈ ರೀತಿಯ ಎಲ್ಲಾ ಸಮಸ್ಯೆಗಳನ್ನು ಅನುಭವಿಸುತ್ತಲೇ ತಾಳ್ಮೆಯಿಂದ ಪ್ರಯಾಣಿಕರು ಏನೇ ಅಂದರೂ ಅದನ್ನು ಕಿವಿಗೆ ಹಾಕಿಕೊಳ್ಳದೆ ಜಾಣ ಕಿವುಡಳಂತೆ ಕೆಲಸ ಮಾಡಬೇಕಾಗಿದೆ. ಕ್ಷಣ ಕ್ಷಣಕ್ಕೂ ನೀವು ಹೆಣ್ಣು, ಹೆಣ್ಣು ಇರುವುದೇ ಭೋಗಕ್ಕಾಗಿ ಎನ್ನುವ ರೀತಿಯಲ್ಲಿ ವರ್ತಿಸುತ್ತಿರುವುದು ಕಂಡು ಕಂಡಕ್ಟರ್‌ಗಳು ಮಾನಸಿಕವಾಗಿ ತುಂಬಾ ಕುಗ್ಗಿದ್ದಾರೆ.

ಇನ್ನೂ ಕೆಲವು ಪ್ರಯಾಣಿಕರು ಕಂಡಕ್ಟರ್ ಪಕ್ಕಕ್ಕೆ ಉದ್ದೇಶ ಪೂರ್ವಕವಾಗಿ ಬಂದು ಕೂಡುವುದು. ಪಕ್ಕದಲ್ಲಿ ಕೂತಾಗ ಕೈ ಮೈಯನ್ನು ತಗುಲಿಸುವುದು, ಕುಡುಕರಂತೂ ಟಿಕೇಟು ತೆಗೆದುಕೊಳ್ಳುವಾಗ ಕಣ್ಣಿನಿಂದ ಸನ್ನೆ ಮಾಡುವುದು, ಟಿಕೆಟ್ ತೆಗೆದುಕೊಳ್ಳಿ ಎಂದರೆ ಸಾಕು ಜಗಳ ಮಾಡುವುದು, ಅವಾಚ್ಯ ಶಬ್ದಗಳಿಂದ ಮಾತನಾಡುವುದು. ಏಕವಚನ ಬಳಸುವುದರಿಂದ ಕಂಡಕ್ಟರ್‌ಗಳು ಮಾನಸಿಕವಾಗಿ ಖಿನ್ನತೆಗೆ ಒಳಗಾಗಿದ್ದಾರೆ.

**ಆ. ಮಾನಸಿಕ ಕಿರುಕುಳ :**

"ನಾಲ್ಕು ಗೋಡೆಗಳ ನಡುವಿನ ಗೃಹಕೃತ್ಯಗಳಿಗೆ ಸೀಮಿತವಾಗಿದ್ದ ಮಹಿಳೆಯರು ಇಂದು ಕುಟುಂಬದ ಹೊರಗೂ ಸಾರ್ವಜನಿಕ ವಲಯಗಳಲ್ಲಿ ಪುರುಷನಿಗೆ ಸರಿಸಮನಾಗಿ ದುಡಿಯುತ್ತಿದ್ದಾಳೆ. ಸಾರ್ವಜನಿಕ ವಲಯಗಳಲ್ಲಿ ಕೆಲಸ ಮಾಡುತ್ತಿರುವವರಲ್ಲಿ ಮಹಿಳಾ ಕಂಡಕ್ಟರ್‌ಗಳು ಒಬ್ಬರು. ಇವರು ದುಡಿಯುವ ಸ್ಥಳದಲ್ಲಿ ಮೇಲಾಧಿಕಾರಿಗಳಿಂದ ಮತ್ತು ಸಹೋದ್ಯೋಗಿಗಳಿಂದ ಕಿರುಕುಳಕ್ಕೆ ಒಳಗಾಗುತ್ತಿದ್ದಾಳೆ.

ಉದ್ಯೋಗ ಸ್ಥಳದಲ್ಲಿ ಮಹಿಳಾ ಮೇಲಾಧಿಕಾರಿಗಳಿಂದ ಮತ್ತು ಸಹೋದ್ಯೋಗಿಗಳಿಂದ ಮಾನಸಿಕ ಕಿರುಕುಳಗಳನ್ನು ಅನುಭವಿಸುತ್ತಿದ್ದಾರೆ. ಕಂಟ್ರೋಲರ್‌ಗಳು ಅವರು ಹೇಳಿದಷ್ಟು ಕಲೆಕ್ಷನ್ ತರದೆ ಇದ್ದಾಗ ಬಾಯಿಗೆ ಸಿಕ್ಕ ಹಾಗೆ ಬೈಯುತ್ತಾರೆ. ನೀವು ಸರಿಯಾಗಿ ಕೂಗಿಲ್ಲ. ಬೇಕೂ ಅಂತಾನೆ, ಪ್ರಯಾಣಿಕರನ್ನು ಬಿಟ್ಟು ಬರುತ್ತೀರಾ, ಹೊಟ್ಟೆಗೆ ಏನು ತಿನ್ನುತ್ತೀರಾ, ಬಸ್‌ಗಳನ್ನು ಸರಿಯಾದ ಸಮಯಕ್ಕೆ ಬಿಟ್ಟುಕೊಂಡು ಹೋಗುವುದಿಲ್ಲ. ಮನೆಯಲ್ಲಿ ಬೆಚ್‌ಗೆ ಮಲಗುತ್ತೀರಾ ಬೇಗ ಬಂದು ನಿಮ್ಮಪ್ಪ ಮಾಡುತ್ತಾನಾ ಅಂತ ಬೈಯುತ್ತಾರೆ. ಸಹೋದ್ಯೋಗಿಗಳು ಮಹಿಳಾ ಕಂಡಕ್ಟರ್‌ಗಳನ್ನು ಅವರೇ ಕರೆದು ಮಾತನಾಡಿಸಿ ನಿನ್ನ ಡ್ರೆಸ್ ಸರಿಯಿಲ್ಲ. ನೀನು ತೆಳ್ಳಗಾದರೆ ಚೆನ್ನಾಗಿ ಇರುತ್ತೀಯಾ ಅಂತ ಹೇಳುವುದು. ಕೆಲವು ಮಹಿಳಾ ಕಂಡಕ್ಟರ್‌ಗಳು ತುಂಬಾ ತೆಳ್ಳಗೆ ಇರುವವರನ್ನು ಸರ್ ನನ್ನ ಬಸ್‌ಗೆ ಈಯಮ್ಮನಾ ಹಾಕಬೇಡಿ ಸರ್ ಇಯಮ್ಮ ಬೇಗ ಬೇಗ ಟಿಕೆಟ್ ತೆಗೆದುಕೊಳ್ಳುವುದಿಲ್ಲ, ಗಂಟೆಗಟ್ಟಲೆ ಬಸ್ ನಿಲ್ಲಿಸಿಕೊಳ್ಳುತ್ತಾರೆ, ಅಂತ ದೂರು ಹೇಳುತ್ತಿರುವುದು ಇನ್ನು ಕೆಲವು ಮಹಿಳಾ ಕಂಡಕ್ಟರ್‌ಗಳು ದಪ್ಪಗಿರುವವರನ್ನು ಇಯಮ್ಮ ದಪ್ಪ ಇದ್ದಾಳೆ ೧೦ ಜನರ ಮಧ್ಯೆ ಹೋಗುವುದಕ್ಕೆ ಆಗುವುದಿಲ್ಲ ಅಂತ ಹೀಯಾಳಿಸಿ ಮಾತನಾಡುವುದು. ಈ ರೀತಿ ಅವರ ವ್ಯಕ್ತಿತ್ವದ ಬಗ್ಗೆ ಹೀಯಾಳಿಸಿ ಮಾತನಾಡುತ್ತಾರೆ.

## ೩. ಸಹಕಾರದ ಕೊರತೆ :

ಮಹಿಳಾ ಕಂಡಕ್ಟರ್‌ಗಳು ಕಾರ್ಯನಿರ್ವಹಿಸುವಾಗ ಅಧಿಕಾರಿಗಳ ಮತ್ತು ಸಹೋದ್ಯೋಗಿಗಳ ಸಹಕಾರ ಇದ್ದರೆ ಮಾತ್ರ ಕೆಲಸ ಮಾಡಲು ಸಾಧ್ಯ. ಆದರೆ ಕೆಲವು ಅಧಿಕಾರಿಗಳು ಮತ್ತು ಸಹೋದ್ಯೋಗಿಗಳು ಸಹಕಾರ ನೀಡುವುದಿಲ್ಲ. ಡಿಪೋದಲ್ಲಿ ಕಸ ಗುಡಿಸುವವನಿಂದ ಹಿಡಿದು ಡೀಸೆಲ್ ಹಾಕುವವರು ಮತ್ತು ಜೊತೆಗೆ ಡ್ರೈವರ್‌ಗೆ ತಿಂಡಿ-ಊಟ ಕೊಡಿಸಬೇಕು. ಇದಕ್ಕೆಲ ದುಡ್ಡನ್ನು ಎಲ್ಲಿಂದ ತರುತ್ತಾರೆ. ಅದಕ್ಕೆ ಟಿಕೆಟ್ ಕೊಡುವಾಗ ಕೆಲವರಿಗೆ ಅಂದರೆ ಒಬ್ಬರಿಗೆ ಇಬ್ಬರಿಗೆ ಟಿಕೆಟ್ ಕೊಡದೆ ಬರೀ ದುಡ್ಡು ತೆಗೆದುಕೊಂಡು ಅದೇ ದುಡ್ಡಲ್ಲಿ ಊಟ-ತಿಂಡಿ ಮಾಡಿಸಬೇಕು. ಅಂತಹ ಸಮಯದಲ್ಲಿ ಚೆಕಿಂಗ್ ಆಫೀಸರ್ ಬಂದರಂತೂ ಕೇಸ್ ಮಾಡುತ್ತಾರೆ. ನೀವು ಬೇಕೂ ಅಂತ ದುಡ್ಡು ಮಾಡುವುದಕ್ಕೆ ಈ ರೀತಿಯೀಗಿ ಮಾಡುತ್ತೀರಾ ಅಂತ ದೂರು ದಾಖಲಿಸುತ್ತಾರೆ. ಡ್ರೈವರ್‌ಗಳಿಗೆ ಊಟ-ತಿಂಡಿ ಕೊಡಿಸದಿದ್ದರೆ ಅವರು ಕೆಲಸ ಮಾಡುವುದಕ್ಕೆ ಸಹಕಾರ ನೀಡುವುದಿಲ್ಲ. ಪ್ರಯಾಣಿಕರು ನಮ್ಮ ಮೇಲೆ ಜಗಳಕ್ಕೆ ಬಂದರೆ ಡ್ರೈವರ್‌ಗಳು ಸಹಾಯಕ್ಕೆ ಹೋಗುವುದಿಲ್ಲ. ನಾವು ಹೇಳಿದ ಹತ್ತಿರ ಸ್ಟಾಪ್ ಕೊಡುವುದಿಲ್ಲ. ಬಸ್ ನಿಲ್ಲಿಸದಿದ್ದರೆ ಪ್ರಯಾಣಿಕರು ಡ್ರೈವರ್‌ನನ್ನು ಬೈಯುವುದಿಲ್ಲ ಕಂಡಕ್ಟರ್‌ಗಳನ್ನೇ ಬೈಯುವುದು.

"ದಿನ ಕಲೆಕ್ಷನ್ ಸಾವಿರ ರೂಪಾಯಿ ಆಯಿತ್ತೆಂದರೆ ಅದಕ್ಕೆ ಡ್ರೈವರ್‌ಗಳಿಗೆ ೧೯ ರೂಪಾಯಿ ಸಿಗುತ್ತದೆ. ಸಾವಿರಕ್ಕೂ ಹೆಚ್ಚಾದರೆ ನೂರಕ್ಕೆ ಮೂರು ರೂಪಾಯಿ ಇನ್ಸೆಂಟಿವ್ ಅದರಲ್ಲಿ ಅರ್ಧಭಾಗ ಡ್ರೈವರ್‌ಗೆ ಕೊಟ್ಟರೆ ಅದಕ್ಕಿಂತ ಹೆಚ್ಚಿಗೆ ಕೇಳುತ್ತಾರೆ. ಪೇ-ಸ್ಲಿಪ್ ಪಡೆಯಬೇಕಾದರೂ ದುಡ್ಡು ಕೊಡಬೇಕು. ಇಲ್ಲದಿದ್ದರೆ ಓಟಿ ಕಟ್ ಮಾಡುತ್ತಾರೆ. ಇಲ್ಲದಿದ್ದರೆ ಓಟಿಗೂ ಸಂಬಳ ಸಿಗುವುದು ಭ್ರಮೆ ಮಾತ್ರ. ತಮ್ಮ ಪಾಲಿನ ರಜೆ ಕೇಳಲೂ ನೂರಾರು ನೋಟು ಕೊಡಬೇಕು ಇಲ್ಲದಿದ್ದರೆ ರಜೆ ಕೊಡುವುದಿಲ್ಲ.[೬] ಡಿಪೋ ಮ್ಯಾನೇಜರ್‌ಗಳು ಕಂಡಕ್ಟರ್‌ಗಳ ಹತ್ತಿರ ನಡೆದುಕೊಳ್ಳುವ ರೀತಿಯ ಬಗ್ಗೆ ತುಂಬಾ ಅಸಮಧಾನ ಹೊಂದಿದ್ದಾರೆ. ದಿನಕ್ಕೆ ಇಂತಿಷ್ಟು ಕಿ.ಮೀ ಅಥವಾ ಇಂತಿಷ್ಟು ಟ್ರಿಪ್ ಅಂತ ಇರುತ್ತೆ ಆ ಡ್ಯೂಟಿ ಮುಗಿಸಿ ಬೇಗ ಬಂದರೆ ಮತ್ತೆ ಇನ್ನೊಂದು ಟ್ರಿಪ್ ಮಾಡಿಕೊಂಡು ಬನ್ನಿ ಅಂತ ಕಳುಹಿಸುತ್ತಾರೆ. ಈ ಟ್ರಿಪ್ ಹೋಗಿ ಬರುವಷ್ಟರಲ್ಲಿ ೯-೧೦ ಗಂಟೆಯಾಗುತ್ತೆ. ಮನೆಗೆ ಹೋಗುವುದು ೧೧-೧೨ ಗಂಟೆ ಮನೆಯಲ್ಲಿ ಮಕ್ಕಳು-ಗಂಡನ ಹತ್ತಿರ ಬೈಯಿಸಿಕೊಳ್ಳಬೇಕು. ಇನ್ನೊಂದು ಟ್ರಿಪ್ ಹೋಗುವುದಿಲ್ಲ ಅಂತ ಹೇಳಿದರೆ ಅದೇ ಸೇಡಿಗೆ ಇನ್ನೊಂದು ದಿನ ರಶ್ ಇರುವ ಕಡೆ ಡ್ಯೂಟಿಗೆ ಹಾಕಿ ಬಿಡುತ್ತಾರೆ. ಜನಭರಿತ ಸ್ಥಳಕ್ಕೆ ಡ್ಯೂಟಿಗೆ ಹಾಕಿ ಅಂತ ಸಮಯದಲ್ಲಿ ಬೇಗ ಬೇಗ ಟಿಕೇಟ್ ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲ. ೫ ನಿಮಿಷಕ್ಕೆ ಒಂದು ಸ್ಟಾಪ್ ಬರುವುದರಿಂದ ಟಿಕೇಟ್ ತೆಗೆದುಕೊಳ್ಳುವುದ್ದಕ್ಕೆ ತೊಂದರೆಯಾಗುತ್ತದೆ. ಅಂತಹ ಸಮಯದಲ್ಲಿ ಬೇಕೂ ಅಂತಾನೇ ಚೆಕಿಂಗ್ ಆಫೀಸರ್‌ಗಳನ್ನು ಕಳುಹಿಸಿ ಕೇಸ್ ಮಾಡಿಬಿಡುತ್ತಾರೆ. ಅದಕ್ಕೆ ಅವರು ಮತ್ತೊಂದು ಟ್ರಿಪ್ ಹೋಗು ಎಂದರೆ ಬಾಯಿ ಮುಚ್ಚಿಕೊಂಡು ಹೋಗಬೇಕು. ಮ್ಯಾನೇಜರ್‌ಗಳಿಗೆ ಎದುರು ಮಾತನಾಡುವಾಗಿಲ್ಲ. "ಮಹಿಳಾ ಕಂಡಕ್ಟರ್‌ಗಳು ಕಾರ್ಯನಿರ್ವಾಹಿಸುವಾಗ

ಕೆಲವು ಪುರುಷ ಅಧಿಕಾರಿಗಳು ಹಾಗೂ ಸಹೋದ್ಯೋಗಿಗಳು ತಾರತಮ್ಯ ಧೋರಣೆಯನ್ನು ಅನುಸರಿಸುತ್ತಾರೆ. ಯಾವುದಾದರೂ ಕ್ಲಿಷ್ಟ ಸಮಸ್ಯೆಗಳನ್ನು ಪರಿಹರಿಸಲು ಆಕೆಯನ್ನು ನೇಮಿಸುವುದು. ಆಕೆಯು ಕ್ಲಿಷ್ಟ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲಾರಳು ಎಂಬುದಾಗಿ ಬಿಂಬಿಸುವುದು, ಮೂದಲಿಸುವುದು ಉದ್ಯೋಗಕ್ಕೆ ಸಂಬಂಧಿಸಿದ ತರಬೇತಿ ವಿಶೇಷ ಹಣ ಪಡೆಯುವ ಅವಕಾಶದಿಂದ ವಂಚಿತಳಾಗುವಂತೆ ಮಾಡುವುದು ಬಡ್ತಿ ತಡೆ ಹಿಡಿಯುವುದು ಇವೇ ಮುಂತಾದ ತಾರತಮ್ಯ ಧೋರಣೆಯನ್ನು ವ್ಯಕ್ತಪಡಿಸಲಾಗುತ್ತಿದೆ.

ಕೆಲಸ ಮುಗಿಸಿ ಮನೆಗೆ ಬರುವಾಗ ಕಲೆಕ್ಷನ್ ಆದ ದುಡ್ಡು ಒಪ್ಪಿಸಿ ಬರಬೇಕು. ಆಗ ಕಂಡಕ್ಟರ್ ಬಳಿ ಹೆಚ್ಚಿಗೆ ದುಡ್ಡಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷೆ ಮಾಡುತ್ತಾರೆ. ಅದಕ್ಕಾಗಿ ಮಹಿಳೆಯರೇ ಅವರನ್ನು ಶೌಚಾಲಯಕ್ಕೆ ಕರೆದುಕೊಂಡು ಹೋಗಿ ತಪಾಸಣೆ ಮಾಡುತ್ತಾರಂತೆ ಬಟ್ಟೆ ಬಿಚ್ಚಿಸಿ ದುಡ್ಡಿದೆಯೋ ಎಂದು ನೋಡುವಾಗ ಜೀವ ಬಾಯಿಗೆ ಬರುತ್ತದೆ. ಸಾಕಪ್ಪ ಈ ಕೆಲಸ ಅನ್ನಿಸಿ ಬಿಡುತ್ತದೆ ಎನ್ನುತ್ತಾರೆ.[೬]

ಮಹಿಳಾ ಕಂಡಕ್ಟರ್‌ಗಳು ಸಂಪೂರ್ಣ ಸೋತಿರುವುದು ಆಕೆ ದಿನನಿತ್ಯ ಅನುಭವಿಸುವ ಲೈಂಗಿಕ ಕಿರುಕುಳಗಳಲ್ಲಿ ಹೇಳಲಾರದ, ಹೇಳಬಾರದ, ಅನುಭವಿಸಬಾರದ ಮುಸುಗಿನೊಳ ಗಣ ಗುದ್ದು ಆಗಿ ಕಾಡುವ ಲೈಂಗಿಕ ನೋವುಗಳು ಅವಳಿಗೆ ಅಪಾರ ನೋವುಂಟು ಮಾಡುತ್ತಿವೆ. ಬಡತನದ ಕಷ್ಟ ನಿವಾರಣೆಗಾಗಿ, ಆರ್ಥಿಕ ಸ್ವಾವಲಂಬನೆಗಾಗಿ ದುಡಿಯುವುದು ಅನಿವಾರ್ಯವಾಗಿ ಕಂಡಕ್ಟರ್ ಉದ್ಯೋಗಕ್ಕೆ ಬಂದವರಾಗಿದ್ದಾರೆ. ಕೆಲಸದ ಸ್ಥಳದಲ್ಲಿ ಪ್ರಯಾಣಿಕರಿಂದ ಪುರುಷ ಮೇಲಾಧಿಕಾರಿಗಳಿಂದ ಸಹೋದ್ಯೋಗಿಗಳಿಂದ ದಬ್ಬಾಳಿಕ್ಕೆ ಲೈಂಗಿಕ ನೋವುಗಳನ್ನು ಹೇಳಿಕೊಳ್ಳಲಾಗದ ಸ್ಥಿತಿಯಲ್ಲಿ ಮಹಿಳಾ ಕಂಡಕ್ಟರ್‌ಗಳು ಸಿಲುಕಿ ನರಳುತ್ತಿದ್ದಾಳೆ.

**೨.೪ ಕೌಟುಂಬಿಕ ಸಮಸ್ಯೆ :**

ಮಹಿಳಾ ಕಂಡಕ್ಟರ್‌ಗಳಿಗೆ "ಬೆಳಕಿನಡೆಯಲ್ಲೇ ಕತ್ತಲೆ ಎಂಬಂತೆ ಅನೇಕ ವೇಳೆ ಮನೆಯಿಂದಲೇ ಪ್ರೋತ್ಸಾಹ ದೊರೆಯುತ್ತಿಲ್ಲ. ತಿಂಗಳಿಡೀ ದುಡಿದು ಎಲ್ಲಾ ಸಂಬಳವನ್ನು ಪತಿಯ ಕೈಗೆ ಕೊಟ್ಟು ತನ್ನ ಸ್ವಂತ ಖರ್ಚಿಗೆ ಪತಿಯ ಹತ್ತಿರ ಕೈಚಾಚಬೇಕಾಗಿದೆ. ದಿನ ಬೆಳಗಾದರೆ ಗಂಡ-ಮಕ್ಕಳ ಚಾಕರಿ ಮಾಡುತ್ತ ಟಿಫನ್ ಕೂಡ ಮಾಡಲು ಸಮಯ ಇಲ್ಲ ಬೆಳ್ಳಿಗೆ ಬೇಗ ಎದ್ದು, ಮನೆ ಕೆಲಸ ಮಾಡಿ ಕೆಲಸಕ್ಕೆ ಹೋಗುವಷ್ಟರಲ್ಲಿ ತಡವಾಗಿ ಬಿಡುತ್ತದೆ. ತಡವಾಗಿ ಹೋದರೆ ಮ್ಯಾನೇಜರ್ ಹತ್ತಿರ ಬೈಯಿಸಿಕೊಳ್ಳಬೇಕು ಎಂಬ ಸನ್ನಿವೇಶ ನೆನಪಾದೊಡನೆ ಗಂಟಲಲ್ಲಿ ಟಿಫನ್ ಇಳಿಯುವುದೇ ಇಲ್ಲ. ಮನೆಯ ಒಳಗೂ ಹೊರಗೂ ಕೆಲಸ ಮಾಡಿದರೂ ಅವಳ ಮನಸ್ಸಿಗೆ ನೆಮ್ಮದಿ ಇಲ್ಲವಾಗಿದೆ.

ಮಕ್ಕಳ ಬೇಕು ಬೇಡಗಳು ಗಂಡನ ಸದಾ ಪಿರಿ ಪಿರಿ ಅತ್ತೆ ಮಾವಂದಿರ ಇತರ ಸದಸ್ಯರ ಜೊತೆ ಹೊಂದಾಣಿಕೆ ಮಾಡಿಕೊಂಡು, ತನ್ನ ವ್ಯಕ್ತಿತ್ವವನ್ನು ತಾನೆ ಹುಡುಕಾಡುವ ಪರಿಸ್ಥಿತಿ "ಮಹಿಳಾ

ಕಂಡಕ್ಟರ್‌ಗಳದ್ದಾಗಿದೆ. ಬಿಡುವಿಲ್ಲದ ಬದುಕು. ಬೆಳ್ಳಿಗೆ ೬ ಗಂಟೆಗೆ ಹೋದರೆ ರಾತ್ರಿ ಕೆಲಸ ಮುಗಿಸಿ, ಮನೆಗೆ ಬಂದು ಅಡಿಗೆ ಮಾಡಿ ಊಟ ಮಾಡಿ ಮಲಗುವಷ್ಟರಲ್ಲಿ ೧೧-೧೨ ಗಂಟೆ ಮತ್ತೆ ಬೆಳ್ಳಿಗೆ ೪.೩೦ಕ್ಕೆ ಎದ್ದು ಮನೆ ಕೆಲಸ ಮಾಡುವುದಲ್ಲದೇ, ಮನೆಯ ಮತ್ತು ಯಜಮಾನನ ಹೆಗಲಿಗೆ ಹೆಗಲು ಕೊಟ್ಟು ಜವಾಬ್ದಾರಿಗಳನ್ನು ತಾನು ಹಂಚಿಕೊಂಡು ತನ್ನ ಮನೆ ತನ್ನ ಮಕ್ಕಳು ಎಂದು ಒದ್ದಾಡುವುದು, ಇಷ್ಟೆಲ್ಲ ಮಾಡಿದರೂ ಮನೆಯಿಂದಲೇ ನಾನಾ ರೀತಿಯ ಶೋಷಣಗೆ ಒಳಗಾಗಿದ್ದಾಳೆ.

ನನಾ ಸ್ತ್ರೀ ಸ್ವತಂತ್ರಂ ಅರ್ಹತಿ ಹೆಣ್ಣುಮಕ್ಕಳು ಹುಟ್ಟಿದ್ದರಿಂದ ಹಿಡಿದು ಸಾಯುವವರೆಗೆ ಪುರುಷನ ಅಧೀನದಲ್ಲಿ ಇರಬೇಕು. ಅವರು ಹೇಳಿದ ಹಾಗೇ ಕೇಳಬೇಕು. ಮನೆ ಕೆಲಸ ಇವರೇ ಮಾಡಬೇಕು. ಗಂಡ-ಅತ್ತೆ-ಮಾವಂದಿರ ಸೇವೆ ಮಾಡುವುದರಲ್ಲಿಯೇ ತಾನು ತನ್ನ ಜೀವನದ ಸಾರ್ಥಕತೆಯನ್ನು ಕಾಣಬೇಕು. ಇದೇ ಜೀವನ ಎಂದು ಜೀವಿಸುವ ರೀತಿಯಲ್ಲಿ ಈ ಪುರುಷಪ್ರಧಾನ ಮೌಲ್ಯಗಳು ಆಕೆಯನ್ನು ಚಿಕ್ಕಂದಿನಿಂದಲೂ ಕುಟುಂಬದಲ್ಲಿ ಆಕೆಗೆ ಸಮಾಜೀಕರಣ ಮಾಡಿದರಿಂದ ಅವಳು ಹಾಗೇ ನಡೆದು ಬರುತ್ತಿದ್ದಾಳೆ.

ಆದರೆ ಇತ್ತೀಚಿನ ದಿನಗಳಲ್ಲಿ ಮಹಿಳೆ ಇಂದು ತನ್ನ ಸಾಮರ್ಥ್ಯವನ್ನು ಹಾಗೂ ಕ್ಷೇತ್ರ ವಿಸ್ತಾರ ಮಾಡಿಕೊಂಡಿದ್ದಾಳೆ. ಆದರೂ ಸಂಪ್ರದಾಯದ ಕೆಲವು ಮೌಲ್ಯಗಳು ಇನ್ನೂ ಅನೇಕ ಕಡೆಗಳಲ್ಲಿ ಇರುವುದರಿಂದ ಆಕೆ ಇನ್ನೂ ಕೆಲವು ಕ್ಷೇತ್ರಗಳಲ್ಲಿ ಭಾಗವಹಿಸುವುದಕ್ಕೆ ಆಗದೆ ಹಿಂದುಳಿದಿದ್ದಳು. ಆದರೆ ೨೧ನೇ ಶತಮಾನದಿಂದೀಚೆಗೆ ಕಂಡಕ್ಟರ್‌ಗಳ ಹುದ್ದೆಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದಾಳೆ. ಆದರೆ ಮಹಿಳೆ ಇಂತಹ ಕಷ್ಟದ ಕೆಲಸಗಳಲ್ಲಿ ದುಡಿಯುತ್ತಿದ್ದರೂ ಮನೆಯಲ್ಲಿಯು ಸಹ ಇವಳು ಕೆಲಸ ಮಾಡಬೇಕಾಗಿದೆ. ಕೆಲವು ಮನೆಗಳಲ್ಲಿ ಗಂಡನಾದವನು ಮನೆ ಕೆಲಸದಲ್ಲಿ ಕೈಜೋಡಿಸಿದರು ಅದು ಸ್ವಲ್ಪ ಮಟ್ಟಿಗೆ ಮಾತ್ರ.

ಹೆಣ್ಣಿಗೆ ತಾಳ್ಮೆ ದೇವರು ಕೊಟ್ಟ ವರ ಸಂಸಾರದಲ್ಲಿ ಏನೇ ಕಷ್ಟ ಬಂದರೂ ಅದನ್ನು ತಾಳ್ಮೆಯಿಂದ ಗಂಡನಿಗೆ ಅತ್ತೆ-ಮಾವಂದಿರಿಗೆ ಎದುರು ಮಾತನಾಡದೆ ಅವರು ಹೇಳಿದ ಹಾಗೆ ಕೇಳಿಕೊಂಡು ಸಂಸಾರದ ಗುಟ್ಟನ್ನು ಕಾಪಾಡಿಕೊಂಡು ಹೋಗಬೇಕು ಎಂಬ ಮೌಲ್ಯವೇ ಗಂಡನಾದವನು ಆಕೆಗೆ ಹೊಡೆದರು, ಬಡೆದರೂ ಅವಾಚ್ಯ ಶಬ್ದಗಳಿಂದ ಬೈದರೂ ಸಹಿಸಿಕೊಂಡು ಹೋಗಬೇಕು. ಸಂಸಾರದಲ್ಲಿ ಗಂಡ ಹೆಂಡತಿಯ ಕಿತ್ತಾಟ, ಅದರ ಪರಿಣಾಮದಿಂದ ಮಕ್ಕಳ ದಿಕ್ಕು ತಪ್ಪಬಹುದು ಎಂದು ಯೋಚಿಸಿ. ಸಂಸಾರದಲ್ಲಿ ಗಂಡ ಏನೇ ಅಂದರೂ ಸಹಿಸಿಕೊಂಡು ರಾಜಿಯಾಗಿ ಬಿಡುವ ಪರಿಸ್ಥಿತಿ ಇವಳದು. ಮನೆಯಲ್ಲಿ ಮಾತ್ರ ಅವಳಿಗೆ ನೆಮ್ಮದಿ ಇಲ್ಲದಾಗಿದೆ. ಏಕೆಂದರೆ ಅವರಿಗೆ ಮನೆಯವರ ಜೊತೆ ತಮ್ಮ ಭಾವನೆಗಳನ್ನು ಹಂಚಿಕೊಳ್ಳಲಾಗದ ಸ್ಥಿತಿ ಅದೇನೋ ಹಿಂಜರಿಕೆ ಎಷ್ಟೇ ಹೊಂದಾಣಿಕೆ ಮಾಡಿಕೊಂಡರೂ ಕೆಲಸದ ಸ್ಥಳದಲ್ಲಿ ಯಾರ ಜೊತೆ ಮಾತನಾಡಿದರೆ ಸಾಕು ಅವನ ಜೊತೆ ನಿನಗೇನು ಕೆಲಸ, ನಿನಗೂ ಅವರಿಗೆ ಏನು ಸಂಬಂಧ ಎಂದು ಅನುಮಾನ ಪಡುವುದು ಮತ್ತೆ ಅಡುಗೆ ಸಂಬಂಧಿಸಿದಂತೆ ಪಲ್ಯಕ್ಕೆ ಉಪ್ಪು ಜಾಸ್ತಿ ಅದೇನು ಅಂತ ಓದಿದ್ದೀಯೋ ದಂಡಕ್ಕೆ ಎಂಬೆಲ್ಲ ಮಾತುಗಳನ್ನು ಕೇಳಬೇಕಾಗಿದೆ.

ಮಹಿಳಾ ಕಂಡಕ್ಟರ್‌ಗಳು ಮನೆ ಮಂದಿಯ ಆರೈಕೆ ಮಾಡುವಂತೆ ತನ್ನನ್ನು ತಾನು ಆರೈಕೆ ಮಾಡಿಕೊಳ್ಳುವುದು ಕಡಿಮೆ. ಎಲ್ಲರ ಬೇಕು ಬೇಡಗಳನ್ನು ಪೂರೈಸುವ ಆಕೆಗೂ ಸಮಸ್ಯೆಗಳಿವೆ ಎಂದು ಯೋಚಿಸುವ ಗೊಡವೆಗೆ ಅವರು ಹೋಗುವುದಿಲ್ಲ. ಎಲ್ಲರಿಗಿಂತ ಬೇಗ ಎದ್ದು ಕೊನೆಯಲ್ಲಿ ತಡವಾಗಿ ಮಲಗುವವಳು ಅವಳೇ, ದಿನಕ್ಕೆ ಮೂರು ಲೀಟರ್ ಹಾಲು ಕೊಂಡರು ಒಂದು ಲೋಟ ಹಾಲು ಕುಡಿದರೆ ಎಲ್ಲಿ ಹಾಲು ಕಡಿಮೆಯಾಗಿ ಬಿಡುತ್ತದೆ ಎಂದು ಲೆಕ್ಕ ಹಾಕುವ ಈ ಜೀವಕ್ಕೆ ಆರೋಗ್ಯದ ಮೇಲೆ ಗಮನಹರಿಸುವುದಿಲ್ಲ. ವಿನಾಕಾರಣ ತನ್ನ ಮೇಲೆ ಹೇರುವ ವಿಷಯ ತಪ್ಪುಭಾವನೆಗಳನ್ನು ಆಕೆ ಮೌನವಾಗಿ ಸಹಿಸಿಕೊಳುತ್ತಾಳೆ.

ಕೌಟುಂಬಿಕ ಜೀವನದಲ್ಲಿ ತನ್ನ ಮನೆ ಉಳಿಸಿಕೊಂಡು ಪತಿಯನ್ನು ಸಂತೋಷದಿಂದ ಇಡಲು ಯಾವ ಪ್ರತಿಫಲ ಬಯಸದೆ ತನ್ನದೆಲ್ಲವನ್ನು ನೀಡಿ ಬಿಡುತ್ತಾಳೆ.

### ೨.೫ ವಿವಾಹಿತ ನಿರ್ವಾಹಕಿಯರ ಸಮಸ್ಯೆಗಳು :

ವಿವಾಹಿತ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳನ್ನು ಚರ್ಚಿಸುವಾಗ ನೆನಪಾಗುವ ಮತ್ತೊಂದು ವರ್ಗ, ತಾಯಿಯಾಗಿರುವ ಮಹಿಳಾ ಕಂಡಕ್ಟರ್‌ಗಳು. ಅವಿಭಕ್ತ ಕುಟುಂಬಗಳು ಭಾರತೀಯ ಸಮಾಜದಲ್ಲಿ ಕ್ರಮೇಣ ಮರೆಯಾಗುತ್ತಿವೆ. ಮಹಿಳಾ ಕಂಡಕ್ಟರ್‌ಗಳು ಉದ್ಯೋಗಕ್ಕೆ ಹೊರಟಾಗ ಅವರ ದಿನಪೂರ್ತಿ ಮಕ್ಕಳಿಂದ ದೂರ ಉಳಿಯಬೇಕಾದ ಸಮಸ್ಯೆಗಳು ತಲೆದೋರುತ್ತವೆ. ತಾಯಾಗಿ ಮತ್ತು ಉದ್ಯೋಗಸ್ಥಳಾಗಿ ಇವರು ವಹಿಸಬೇಕಾದ ಈ ದ್ವಿಪಾತ್ರ ಪ್ರಾಯಶಃ ಇನ್ನಿತರ ಎಲ್ಲಾ ಹೊಣೆಗಳಿಗಿಂತಲೂ ಗುರುತರವಾದ್ದದು. ಭಾವುಕರಾದ ಭಾರತೀಯ ಮಹಿಳೆಯರಿಗೆ ಒಂದೆಡೇ ಮಕ್ಕಳ ಸೆಳೆತ, ಮತ್ತೊಂದೆಡೆ ಸಂಪಾದಿಸಬೇಕಾದ ಅಗತ್ಯ ಶಿಶುಪಾಲ ಕೇಂದ್ರಗಳು ವ್ಯವಸ್ಥೆ ಮಹಿಳಾ ಕಂಡಕ್ಟರ್‌ಗಳ ಮಕ್ಕಳಿಗೆ ಇಲ್ಲ ಮಕ್ಕಳನ್ನು ಮನೆಯಲ್ಲಿ ಬಿಟ್ಟು ಕೆಲಸಕ್ಕೆ ಬಂದರೆ ಒಂದು ಬಗೆಯ ಅನಿಶ್ಚಿಯಂತೆ ಕಾಡುವುದು ಸಹಜ. ಆದರೆ ಇದೊಂದು ವಿಷವೃತ್ತದಂತೆ ಏಕೆಂದರೆ ತಾಯಂದಿರಾಗಿ ಮಹಿಳೆಯರಿಗೆ ಪ್ರಮುಖ ಪಾತ್ರವಿದ್ದರೂ ಮಕ್ಕಳು ಸರಿಯಾಗಿ ಬೆಳೆಯಬೇಕಾದಲ್ಲಿ ತಾಯಿಯ ಆರೈಕೆ ಅಗತ್ಯವಾದದ್ದು ಮಕ್ಕಳ ನೈತಿಕ ಹಾಗೆ ಬೌದ್ಧಿಕ ಹವ್ಯಾಸಗಳು ಪ್ರಾರಂಭಿಕ ವರ್ಷಗಳಲ್ಲಿ ಅವರಲ್ಲಿ ಮೂಡಿಸುವ ಮೌಲ್ಯಗಳನ್ನು ಆವರಿಸಿರುವುದರಿಂದ ಮಹಿಳೆಯರು ಈ ದ್ವಿಪಾತ್ರಗಳನ್ನು ಕೆಲವು ವರ್ಷಗಳವರೆಗೆ ಕಷ್ಟಪಟ್ಟು ತೂಗಿಸಲೇ ಬೇಕಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ತಾಯಂದಿರು ಆತಂಕಗಳನ್ನು ಮನಗಂಡು ಕೆಲವು ಕಛೇರಿಗಳು ಹಾಗೂ ಕಾರ್ಖಾನೆಗಳಲ್ಲಿ ಆವರಣದಲ್ಲೇ ಎಳೆಯ ವಯಸ್ಸಿನ ಮಕ್ಕಳನ್ನು ನೋಡಿಕೊಳ್ಳುವ ಶಿಶುಪಾಲನಾ ಕೇಂದ್ರಗಳು ಪ್ರಾರಂಭವಾಗಿವೆ. ಆದರೆ ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ಘಟಕದಡಿಯಲ್ಲಿ ಬರುವ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಹೊಸಪೇಟೆ ತಾಲೂಕು ಡಿಪೋಗಳಲ್ಲಿ ಕೆಲಸ ನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳಿಗೆ ಈ ವ್ಯವಸ್ಥೆಯನ್ನು ಒದಗಿಸಿಕೊಟ್ಟಿಲ್ಲದಿರುವುದು ತುಂಬಾ ಶೋಚನೀಯವಾಗಿದೆ. ಮಹಿಳಾ ಕಂಡಕ್ಟರ್‌ಗಳು ಮಧ್ಯಾಹ್ನ ಒಂದು ಟ್ರಿಪ್ ಮುಗಿಸಿಕೊಂಡು ಒಂದು ಬಸ್ ನಿಲ್ದಾಣದಲ್ಲಿಯೇ ಕೂತು ಹಾಲುಣಿಸುವ ಸ್ಥಿತಿ ಅವರದಾಗಿದೆ.

## ೨.೬ ಆರೋಗ್ಯದ ಸಮಸ್ಯೆಗಳು :

"ಮಹಿಳೆಯ ಆರೋಗ್ಯ ಇಡೀ ಸಮುದಾಯದ ಆರೋಗ್ಯದ ಅಡಿಗಲ್ಲು, ಅಷ್ಟೇ ಅಲ್ಲದೇ ಸ್ತ್ರೀಯರ ಆರೋಗ್ಯ ಆಯಾ ಸಮಾಜದ ಒಟ್ಟು ಆರೋಗ್ಯಕ್ಕೆ ಹಿಡಿದ ಕೈಗನ್ನಡಿಯೆನ್ನಬಹುದು. ಸ್ತ್ರೀಯರು ಇಡೀ ಮನುಕುಲದ ಅರ್ಧಭಾಗವಾಗಿದ್ದು ಮುಂದಿನ ಮನುಕುಲದ ಸಂತತಿ ಆರೋಗ್ಯವಾಗಿ ಹುಟ್ಟುವುದು. ಹೀಗೆ ಬದುಕಿ ಉಳಿದ ಶಿಶುಗಳ ಆರೋಗ್ಯ ಬಹುಮಟ್ಟಿಗೆ ಸ್ತ್ರೀಯರ ಸಂಪೂರ್ಣ ಆರೋಗ್ಯ ಪರಿಸ್ಥಿತಿಯ ಮೇಲೆ ಅವಲಂಬಿತವಾಗಿರುತ್ತದೆ. ಮಹಿಳೆ ಅನಾದಿಕಾಲದಿಂದಲೂ ಎಲ್ಲಾ ಸಮಾಜಗಳಲ್ಲೂ ಬರಿ ಸಂತಾನೋತ್ಪತ್ತಿಯ ಕಾರ್ಯವನ್ನಷ್ಟೇ ಅಲ್ಲದೇ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಕುಟುಂಬ ಸಂಪತ್ತಿನ ಆದಾಯಕ್ಕಾಗಿಯೂ ಪುರುಷರಿಗೆ ಹೆಗಲಿಗೆ ಹೆಗಲು ಕೊಟ್ಟು ಕೆಲವೊಮ್ಮೆ ಪುರುಷರಿಗಿಂತ ಹೆಚ್ಚಿನ ಕೊಡುಗೆ ನೀಡಾತ್ತಾ ಬಂದಿದ್ದಾಳೆ. ಇನ್ನೂ ಕುಟುಂಬದ ಕೆಲಸಗಳು ಮಕ್ಕಳ ಲಾಲನೆ, ಪಾಲನೆ ವಯಸ್ಸಾದ ಕುಟುಂಬದ ಸದಸ್ಯರು ಅನಾರೋಗ್ಯ ಪೀಡಿತರ ಸೇವೆಯೂ ಮತ್ತು ಬಹುಮುಖಿಯಾದ ಶ್ರಮದ ಕೆಲಸಗಳನ್ನು ಮಾಡುತ್ತಿದ್ದಾರೆ. ಮಹಿಳಾ ಕಂಡಕ್ಟರ್‌ಗಳು ದಿನಾಲು ೧೪-೧೫ ತಾಸು ನಿಂತುಕೊಂಡೆ ಕೆಲಸ ಮಾಡುವುದರಿಂದ ಆರೋಗ್ಯದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕುಡಿಯುವುದಕ್ಕೆ ಶುದ್ಧ ನೀರು ಇಲ್ಲದ ಕಾರಣ ಸರಿಯಾದ ಊಟವಿಲ್ಲದೆ ಟೈಫೇಡ್‌ಗಳಂತಹ ಜ್ವರಕ್ಕೆ ತುತ್ತಾಗಿದ್ದಾರೆ. ದಿನದಲ್ಲಿ ಹೆಚ್ಚಿನ ಸಮಯ ಬಸ್‌ನಲ್ಲಿಯೇ ಕಳೆಯುವುದರಿಂದ ತುಂಬಾ ಹೀಟ್ ಆಗಿ ತಿಂಗಳಿಗೆ ೨ ಸಾರಿ ಮುಟ್ಟಾಗುವುದು ಮುಟ್ಟಿನ ತೊಂದರೆ ಅನುಭವವಿಸುತ್ತಿದ್ದಾರೆ. ಗರ್ಭಿಣಿ ಇದ್ದಾಗ ವಿಶ್ರಾಂತಿ ಇಲ್ಲದೆ ನಿರಂತರವಾಗಿ ಕೆಲಸ ಮಾಡುತ್ತಿರುವುದರಿಂದ ಕೆಲವು ಮಹಿಳಾ ಕಂಡಕ್ಟರ್‌ಗಳಿಗೆ ಗರ್ಭಪಾತವಾಗಿ ಅವರು ತಾಯ್ತನಕ್ಕೆ ಅಡ್ಡಿಯಾಗಿದೆ. ಪದೇ ಪದೇ ಗರ್ಭಪಾತವಾಗುವುದರಿಂದ ಅವರು ದೈಹಿಕವಾಗಿ, ಮಾನಸಿಕವಾಗಿ ತುಂಬಾ ಕುಗ್ಗಿದ್ದಾರೆ.

## ೨.೭ ಬಿಡುವಿನ ಸಮಸ್ಯೆ :

ಮಹಿಳಾ ಕಂಡಕ್ಟರ್‌ಗಳಿಗೆ ಅವರದೆ ಸಮಯ ಬಿಡುವು ಸಿಗದೆ ಹೋಗುತ್ತಿವೆ. ಮನೆಯ ಒಳಗೂ ಅಥವಾ ಹೊರಗು ದುಡಿಯುವ ಇವಳು ಬದುಕಿನ ಹೊರಗಡೆ ಸಂತೋಷವನ್ನು ಅನುಭವಿಸಲಾಗದ ಸಂದರ್ಭಗಳು ಅವಳನ್ನು ಆವರಿಸಿದೆ. ನಮ್ಮ ಸಮಾಜ ಕೂಡ ಅವಳನ್ನು ಬೆಳೆಸುವಾಗಲು ನೀನು ಇರುವುದೇ ಇನ್ನೊಬ್ಬರಿಗಾಗಿ ಇನ್ನೊಬ್ಬರ ಸೇವೆ ಮಾಡುವುದಕ್ಕಾಗಿ ಎನ್ನುವ ರೀತಿಯಲ್ಲಿ ಅವಳನ್ನು ಬೆಳೆಸುತ್ತದೆ. ದುಡಿದು ಬೇಸತ್ತ ಹೆಣ್ಣು ಜೀವಕ್ಕೆ ಬಿಡುವನ್ನು ಪಡೆಯದೇ ಜೀವಿಸುತ್ತಿದ್ದಾಳೆ. "ಪಶು ಪಕ್ಷಿಗಳಿಗಾದರೂ ಬಿಡುವು ಅನ್ನುವುದು ಇರುತ್ತವೆ. ಆದರೆ ಬಿಡುವು ಮಹಿಳಾ ಕಂಡಕ್ಟರ್ ಪಾಲಿಗೆ ಮಾತ್ರ ಇಲ್ಲದಂತಾಗಿದೆ. ವಾರದಲ್ಲಿ ಒಂದು ದಿನ ರಜೆ ಇರುತ್ತೇ ಅದನ್ನು ಪಡೆಯುವುಮ ಕೂಡ ಕಷ್ಟ ಅದನ್ನು ಕಳವು ಮಾಡಬೇಕಾದ ಸಂದರ್ಭ ಒದಗಿ ಬಂದಿದೆ.

"ಬಿಡುವು ಅಥವಾ ವಿರಾಮ ಎಂದರೆ ಕೇವಲ ವಿಶ್ರಾಂತಿ ಪುರುಸೊತ್ತು ಎಂಬ ಅರ್ಥವಲ್ಲ. ವಿರಾಮಕ್ಕೆ ಅನೇಕ ಪರಿಕಲ್ಪನೆಗಳಿವೆ. ಒಬ್ಬ ವ್ಯಕ್ತಿಗೆ ತನ್ನ ಸ್ವಇಚ್ಛೆಯಂತೆ ರೂಪಿಸಿಕೊಳ್ಳಲು ಇರುವ ಸಮಯ. ಈ ಸಮಯವನ್ನು ವಿಶ್ರಾಂತಿಯಲ್ಲಾಗಲಿ ಅಥವಾ ಇಷ್ಟವಾಗುವ ಚಟುವಟಿಕೆಗಳಲ್ಲಾಗಲಿ ರಚನಾತ್ಮಕ ಕಾರ್ಯಗಳಲ್ಲಾಗಲಿ ಕಳೆಯಬಹುದು. ಬಿಡುವಿನಲ್ಲಿ ಮಾಡಬಹುದಾದಂತಹ ಕಾರ್ಯಗಳು ಹಲವು ಬಿಡುವು ಅಥವಾ ವಿರಾಮ ಎನ್ನುವ ಸ್ಥಿತಿಗೆ ಹಲವು ಗುಣಗಳಿವೆ.

೧. ವಿರಾಮ ಎಂದರೆ ವ್ಯಕ್ತಿಗೆ ಲಭ್ಯವಿರುವ ವಿರಾಮ ನಿರ್ಬಂಧನೆಗಳಿಗೆ ಒಳಪಡೆದ ಇರುವಂತ ಸಮಯ.

೨. ಈ ಸಮಯವನ್ನು ರೂಪಿಸಿಕೊಳ್ಳಬೇಕಾದ ರೀತಿಯಲ್ಲಿ ವ್ಯಯಿಸುವ ಆಯ್ಕೆಯ ಸ್ವತಂತ್ರ ವ್ಯಕ್ತಿಗಿರುತ್ತದೆ.

೩. ಮಾನಸಿಕವಾಗಿ ವಿರಾಮದಲ್ಲಿ ಕಳೆದ ವೇಳೆ ಹಿತಕೊಡುವಂತಹದ್ದು.

೪. ವಿರಾಮದಲ್ಲಿ ಕಳೆಯುವ ಸಮಯ ನಿರೀಕ್ಷೆ ಹಾಗೂ ನೆನಪು ಎರಡು ಹಿತಕರ.

೫. ಈ ಸಮಯ ಆರ್ಥಿಕವಾಗಿ ಉಪಯಕ್ತವಾಗಿರಬೇಕೆಂದು ಬಲವಂತವಿರಬಾರದು.

೬. ಇಂತಹ ಸಮಯದಲ್ಲಿ ವ್ಯಕ್ತಿತ್ವ ಬೆಳವಣಿಗೆಗೆ ಸಂಬಂಧಿಸಿದಂತೆ ಉಪಯೋಗಗಳು ವ್ಯಕ್ತಿಗೆ ಲಭ್ಯವಿವಾಗುವುದು."[೬]

ವಿರಾಮದ ಉಪಯೋಗದಲ್ಲಿರುವ ಲಿಂಗ ವ್ಯತ್ಯಾಸಗಳನ್ನು ಮಹಿಳೆಯರು ಇಡೀ ಜೀವನ ಚಕ್ರದ ಹಿನ್ನೆಲೆಯಲ್ಲಿ ಪರಿಹರಿಸಬಹುದು. ಎಷ್ಟು ವಿರಾಮವನ್ನು ಹೇಗೆ ಕಳೆಯುತ್ತಾಳೆ ಎನ್ನುವುದು ಅವಳ ಜೀವನದ ಹಂತವನ್ನು ಅವಲಂಬಿಸಿದೆ. ವಯಸ್ಸು, ವರ್ಗ, ಕುಟುಂಬದ ಸ್ಥಿತಿ ಉದ್ಯೋಗ, ಜೈವಿಕ ಸ್ಥಿತಿ ಮುಂತಾದವನ್ನು ಅವಲಂಬಿಸಿದೆ. ಅದರಲ್ಲಿ ಮಹಿಳೆಯರು ಶಿಕ್ಷಕಿ, ದಾದಿ, ವೈದ್ಯಾ ಇನ್ನಿತರ ಉದ್ಯೋಗಗಳಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಬಿಡುವು ವಿರಾಮ ಸಿಗುತ್ತದೆ. ಆ ಸಮಯದಲ್ಲಿ ಅವರು ತಮ್ಮ ವ್ಯಕ್ತಿತ್ವವನ್ನು ಬೆಳವಣಿಗೆ ಮಾಡಿಕೊಳ್ಳುವುದಕ್ಕೆ ತಮ್ಮಗೆ ಇಷ್ಟವಾದ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವುದಕ್ಕೆ ಸ್ವಲ್ಪವಾದರು ಸಮಯವಿರುತ್ತದೆ. ಆದರೆ ಕೆ.ಎಸ್.ಆರ್.ಟಿ.ಸಿಯಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ಕಂಡಕ್ಟರ್‌ಗಳಿಗೆ ಬಿಡುವು ಎಂದರೇನು ಎಂದು ಕೇಳುವ ಸ್ಥಿತಿಯಲ್ಲಿದ್ದಾರೆ. ದಿನದಲ್ಲಿ ೧೨-೧೬ ತಾಸು ಕೆಲಸ, ಮನೆ ಕೆಲಸದಲ್ಲಿಯೇ ಕಳೆಯುವ ಪರಿಸ್ಥಿತಿ ಇವರದು. ಅವರು ಮುಂದೆ ಓದಬೇಕು ಎನ್ನುವ ಆಸೆ ಇದ್ದರು ಓದುವುದಕ್ಕೆ ಸಮಯ ಇರುವುದಿಲ್ಲ. ಅವಳು ದುಡಿದರೂ ಅವಳ ಜೀವನ ನೆಮ್ಮದಿಯಾಗಿಲ್ಲ ಅವಳಿಗೆ ಸಿಗಬೇಕಾದ ಗೌರವ, ಸಮಯ ಸಿಗುತ್ತಿಲ್ಲ.

ಮಹಿಳಾ ಕಂಡಕ್ಟರ್‌ಗಳಿಗೆ ಸಮಯವಾಗಲಿ ಬಿಡುವಾಗಲಿ ಅವಳ ನಿಯಂತ್ರಣದಲಿಲ್ಲ ಎಂಬುದು ಕಟುಸತ್ಯ. ಈ ಹಿನ್ನೆಲೆಯಲ್ಲಿ ವಿರಾಮದ ನಿಜವಾದ ಅರ್ಥವನ್ನು ಮಹಿಳಾ ಕಂಡಕ್ಟರ್‌ಗಳಿಗೆ

ಮಾಡಿಕೊಡಬೇಕಾಗಿದೆ. ದೈಹಿಕ ಮತ್ತು ಮಾನಸಿಕ ಆರೋಗ್ಯಗಳೆರಡಕ್ಕೂ ಅಗತ್ಯವಾಗಿ ವಿರಾಮ ಬೇಕು. ಆದರೆ ಅವಳಿಗೆ ವಿರಾಮ ಸಿಗುತ್ತಿಲ್ಲ. ವಿರಾಮ ಸಿಗದೇ ಅವಳ ಸ್ವಂತಿಕೆಯನ್ನು ರೂಪಿಸಿಕೊಳ್ಳಲು ವ್ಯಕ್ತಿತ್ವ ಬೆಳೆಸಿಕೊಳ್ಳಲು ವಿರಾಮ ಉತ್ತಮ ಸಾಧನ. ವಿರಾಮವನ್ನು ಯಾವ ತಪ್ಪಿತಸ್ಥ ಭಾವನೆಯೂ ಇಲ್ಲದೆ ಅನುಭವಿಸುವಂತಾಗಬೇಕು. ದುಡಿಮೆ ಹಾಗೂ ಬಿಡುವು ಒಂದೇ ನಾಣ್ಯದ ಎರಡು ಮುಖಗಳು. ಎಲ್ಲಿ ದುಡಿಮೆ ಇದೆಯೋ ಅಲ್ಲಿ ಸಹಜವಾಗಿಯೇ ಬಿಡುವಿಗೂ ಅವಕಾಶವಿರಬೇಕು.

**ಮಹಿಳಾ ಕಂಡಕ್ಟರ್‌ಗಳಿಗೆ ಬಿಡುವು ಸಿಗದಿರುವುದಕ್ಕೆ ಕಾರಣಗಳು :**

೧. ಕೌಟುಂಬಿಕ ಜವಾಬ್ದಾರಿ ಎಂದರೆ ಮಹಿಳೆಯರದೆ ಎಂದು ಪ್ರಾಚೀನ ಪುರುಷ ಪಕ್ಷಪಾತ ಪೂರ್ವಗ್ರಹಗಳು, ಮನೆಯ ಜವಾಬ್ದಾರಿಯನ್ನು ಗಂಡಸು ಹಂಚಿಕೊಳ್ಳಬೇಕು ಎಂಬ ಅರಿವಿನ ಕೊರತೆ. ಅವರು ದಿನದಲ್ಲಿ ೧೪-೧೫ ತಾಸು ನಿಂತುಕೊಂಡೇ ಕೆಲಸ ಮಾಡಿ ಬಂದು ಮತ್ತೆ ಮನೆಯಲ್ಲಿ ಕೆಲಸ ಮಾಡಬೇಕಾಗಿದೆ. ಅವಳು ಸುಸ್ತಾಗಿ ಬಂದಿರುತ್ತಾಳೆ. ಅವಳಿಗೆ ಬರುವುದರೊಳಗೆ ಮನೆಯ ಕೆಲಸದಲ್ಲಿ ಸಹಾಯ ಮಾಡುವುದಿಲ್ಲ. ಕುಟುಂಬದಲ್ಲಿ ಹೆಣ್ಣುಮಕ್ಕಳಿಗೆ ಗಂಡುಮಕ್ಕಳು ಬೇರೆ ಬೇರೆ ರೀತಿಯಲ್ಲಿ ಬೆಳೆಸುತ್ತಾರೆ. ಮನೆ ಕೆಲಸ ಹೆಣ್ಣುಮಕ್ಕಳು ಮಾತ್ರ ಮಾಡಬೇಕು ಮನೆ ಕೆಲಸ ಗಂಡು ಮಕ್ಕಳು ಮಾಡುವುದು ಅಪರಾಧ, ಅವಮಾನ ಎನ್ನುವ ರೀತಿಯಲ್ಲಿ ಬೆಳೆಸುವುದರಿಂದ ಅವರು ಮನೆ ಕೆಲಸ ಮಾಡುವುದಿಲ್ಲ.

೨. ಸಾರ್ವಜನಿಕ ವಲಯದಲ್ಲಿ ಉದ್ಯೋಗ ಮಾಡುತ್ತಿರುವ ಮಹಿಳಾ ಕಂಡಕ್ಟರ್‌ಗಳನ್ನು ನಿಗದಿತ ಸಮಯ ಇದ್ದರೂ ಆ ಸಮಯಕ್ಕೆ ತಕ್ಕ ಹಾಗೇ ದುಡಿಸಿಕೊಳ್ಳದೆ ಹೆಚ್ಚಿನ ಸಮಯ ದುಡಿಸಿಕೊಳ್ಳುವುದರಿಂದ ಮನೆಗೆ ಹೋಗುವಷ್ಟರಲ್ಲಿ ೧೦-೧೧ ಗಂಟೆಯಾಗುತ್ತದೆ. ಮತ್ತೆ ಬೆಳಿಗ್ಗೆ ೫ ಗಂಟೆಗೆ ಎದ್ದು ಮನೆ ಕೆಲಸ ಮಾಡುವುದು ಇದೇ ದಿನಂಪ್ರತಿ ಮಾಡುವುದರಲ್ಲಿಯೇ ಅವಳು ಸಮಯ ಕಳೆಯುತ್ತಾಳೆ.

**೨.೮ ಮೂಲಭೂತ ಸೌಲಭ್ಯಗಳ ಕೊರತೆ :**

ಸರ್ಕಾರ ಉದ್ಯೋಗಸ್ಥ ಮಹಿಳೆಯರಿಗೆ ಕೆಲಸದ ಸ್ಥಳದಲ್ಲಿ ಉತ್ತಮ ವಾತಾವರಣ ಶುದ್ಧ ಕುಡಿಯುವ ನೀರು, ಶೌಚಾಲಯ ವ್ಯವಸ್ಥೆ, ಪ್ರತ್ಯೇಕ ವಿಶ್ರಾಂತಿ ಸ್ಥಳ ಮುಂತಾದ ಸೌಲಭ್ಯಗಳನ್ನು ಒದಗಿಸಿಕೊಟ್ಟಿದೆ. ಆದರೆ ಮಹಿಳಾ ಕಂಡಕ್ಟರ್‌ಗಳಿಗೆ ಕೆಲಸದ ಸ್ಥಳದಲ್ಲಿ ಉತ್ತಮ ವಾತಾವರಣ ಇಲ್ಲ. ಶುದ್ಧ ಕುಡಿಯುವ ನೀರು ಇಲ್ಲದೆ ಕಲುಷಿತ ನೀರನ್ನು ಕುಡಿದು ಅನಾರೋಗ್ಯಕ್ಕೆ ತುತ್ತಾಗುತ್ತಿದ್ದಾರೆ. ಶೌಚಾಲಯ ವ್ಯವಸ್ಥೆ ಸರಿಯಾಗಿ ಇಲ್ಲದಿರುವುದರಿಂದ ಮತ್ತು ಪ್ರತ್ಯೇಕ ವಿಶ್ರಾಂತಿ ಸ್ಥಳವಿಲ್ಲದೆ ತೊಂದರೆಗೆ ಒಳಗಾಗಿದ್ದಾರೆ." (ಶೀಲಾ ಶೆಟ್ಟಿ ಎಸ್, ನಿರ್ವಾಹಕಿಯರ ಸಮಸ್ಯೆಗೆ ಎಲ್ಲಿದೆ ಸ್ವಾಪ್?, ವಿಜಯ ಕರ್ನಾಟಕ, ಬೆಂಗಳೂರು ವಿಜಯ, ೨೧.೦೫.೨೦೦೭)

**ಟಿಪ್ಪಣಿಗಳು**

೧. ಚಂದ್ರಶೇಖರ ದಾಮ್ಲೆ ಡಾ, **ಸಮಾಜಶಾಸ್ತ್ರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೨. ಪಾಟೀಲ್ ಎನ್.ಆರ್, ಲೇಖನ, **ಸಮರ್ಥ ಸಂಪೂರ್ಣ ಬಳಕೆಯಾಗದ ಮಹಿಳಾ ಬಂಡವಾಳ,** ಪ್ರಜಾವಾಣಿ, ೧೦.೦೭.೦೨

೩. ವಿಶಾಲಕ್ಷಿ ಅಕ್ಕಿ, ಲೇಖನ, **ಇಂದು ಕಂಡಕ್ಟರ್ ನಾಳೆ ಡ್ರೈವರ್,** ಪ್ರಜಾವಾಣಿ, ೦೭.೦೫.೦೫

೪. ಅದೇ

೫. ರಶ್ಮಿ.ಎನ್, ಲೇಖನ, **ಬಸ್‌ಗಳ ನಿರ್ವಹಣೆಯ ಬವಣೆ,** ಸುಧಾ ಮಾಸಿಕ ಪತ್ರಿಕೆ, ೦೨.೦೧.೦೩

೬. ವಿಶಾಲಕ್ಷಿ ಅಕ್ಕಿ, ಲೇಖನ, **ಇಂದು ಕಂಡಕ್ಟರ್ ನಾಳೆ ಡ್ರೈವರ್,** ಪ್ರಜಾವಾಣಿ, ೦೭.೦೫.೦೫

೭. ಅದೇ

೮. ಶ್ರೀಮತಿ ಎಚ್.ಎಸ್., ಶಿವಾನಂದ ಎಸ್.ವಿರಕ್ತಮಠ, ಜೆ.ಕೃಷ್ಣ, **ಮಹಿಳೆ ದುಡಿಮೆ ಮತ್ತು ಬಿಡುವು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

## ಅಧ್ಯಾಯ ಮೂರು

# ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು

೩.೧ ಸಮಾಜದ ದೃಷ್ಟಿಯಲ್ಲಿ ಮಹಿಳಾ ಕಂಡಕ್ಟರ್‌ಗಳು

- ಅ. ಎರಡನೆಯ ದರ್ಜೆಯ ವೃತ್ತಿಯಾಗಿ
- ಆ. ಸಾಂಪ್ರದಾಯಿಕ ದೃಷ್ಟಿಯಲ್ಲಿ
- ಇ. ಹಿಂದೂ ಸಂಪ್ರದಾಯ
- ಈ. ಸಹೋದ್ಯೋಗಗಳ ದೃಷ್ಟಿಯಲ್ಲಿ ಮಹಿಳಾ ಕಂಡಕ್ಟರ್‌ಗಳು
  - ೧ ಕಂಟ್ರೋಲರ್
  - ೨ ಪುರುಷ ಡ್ರೈವರ್ ಮತ್ತು ಕಂಡಕ್ಟರ್‌ಗಳ ದೃಷ್ಟಿಯಲ್ಲಿ
  - ೩ ಮ್ಯಾನೇಜರ್
  - ೪ ಟ್ರಾಫಿಕ್ ಇನ್‌ಸ್ಪೆಕ್ಟರ್
  - ೫ ಪ್ರಯಾಣಿಕರ ದೃಷ್ಟಿಯಲ್ಲಿ

೩.೨ ಕೌಟುಂಬಿಕ ಸಮಸ್ಯೆ

- ಅ. ಆರ್ಥಿಕ ಅಭದ್ರತೆ
- ಆ. ಗಂಡಂದಿರ ಆರ್ಥಿಕ ಸ್ಥಿತಿ
- ಇ. ಕುಟುಂಬದ ಸದಸ್ಯರ ಜೊತೆ ಹೊಂದಾಣಿಕೆ ಸಮಸ್ಯೆ

೩.೩ ವೈವಾಹಿಕ ಸಮಸ್ಯೆಗಳು

- ಅ. ಲೈಂಗಿಕ ತೃಪ್ತಿ
- ಆ. ಸಂತಾನೋತ್ಪತ್ತಿ
- ಇ. ವಿವಾಹಕ್ಕೆ ತೊಂದರೆ
- ಈ. ಶೀಲದ ಪರಿಕಲ್ಪನೆ

೩.೪ ಆರೋಗ್ಯ ಸಮಸ್ಯೆ

- ಅ. ಶ್ವಾಸಕೋಶದ ತೊಂದರೆ
- ಆ. ಋತುಚಕ್ರದಲ್ಲಿ ಏರುಪೇರು
- ಇ. ಗರ್ಭಪಾತ

೩.೫ ಪ್ರಯಾಣಿಕರಿಂದ ಲೈಂಗಿಕ ಕಿರುಕುಳ

- ಅ. ಅನಾವಶ್ಯಕ ದೈಹಿಕ ಸ್ಪರ್ಶ

ಆ. ಲೈಂಗಿಕ ಒಲವಿಗಾಗಿ ಒತ್ತಾಯ ಮತ್ತು ಬೇಡಿಕೆ

ಇ. ಲೈಂಗಿಕ ಚಿತ್ರಗಳ ಪ್ರದರ್ಶನ

ಈ. ಲೈಂಗಿಕಾರ್ಥದ ಮಾತುಗಳು

ಉ. ಬೇರೆ ಯಾವುದೇ ವಿಧದ ಸ್ವಾಗತರ್ಹವಲ್ಲದ ಬಾಯಿಮಾತಿನ ಅಥವಾ ಬಾಯಿ ಮಾತಿನಲ್ಲದ ಲೈಂಗಿಕ ಸ್ವರೂಪದ ನಡತೆ

೩.೬ ಪ್ರಯಾಣಿಕರಿಂದ ಎದುರಿಸುಂತಹ ಇನ್ನಿತರ ಸಮಸ್ಯೆಗಳು

ಅ. ಅಸಭ್ಯ ವರ್ತನೆ

ಆ. ಟಿಕೇಟ್ ತೆಗೆದುಕೊಳ್ಳದೇ ಇರುವುದು

ಇ. ಬಸ್ ಕೆಟ್ಟು ಹೋದಾಗ

೩.೭ ಸಹೋದ್ಯೋಗಿಗಳಿಂದ ಎದುರಿಸುತ್ತಿರುವ ಸಮಸ್ಯೆಗಳು

ಅ. ಸಹೋದ್ಯೋಗಿಗಗಳಿಂದ ಲೈಂಗಿಕ ಕಿರುಕುಳ

ಆ. ಸಹೋದ್ಯೋಗಿಗಳಿಂದ ಇನ್ನಿತರೆ ತೊಂದರೆಗಳು

ಇ. ಮೇಲಾಧಿಕಾರಿಗಳಿಂದ ಎದುರಿಸುವಂತಹ ತೊಂದರೆಗಳು

೩.೮ ಮಾನಸಿಕ ಸಮಸ್ಯೆಗಳು

ಅ. ತಂದೆ ತಾಯಿ, ಮಕ್ಕಳ ನಡುವೆ ಭಿನ್ನಾಭಿಪ್ರಾಯ

ಆ. ಗಂಡ ಹೆಂಡತಿಯರ ಮನಸ್ತಾಪ

ಇ. ಅತ್ತೆ ಸೊಸೆ ಜಗಳ

ಈ. ಮೇಲಾಧಿಕಾರಿಗಳ ಕೋಪ

ಉ. ಸಹೋದ್ಯೋಗಿಗಳ ಅಸಹನೆ

ಊ. ಪ್ರಯಾಣಿಕರ ಒರಟುತನ

೩.೯ ಮೂಲಭೂತ ಸೌಲಭ್ಯಗಳ ಕೊರತೆ

ಅ. ಶಿಶುಪಾಲನಾ ಕೇಂದ್ರ

ಆ. ಶಿಶುಪಾಲನಾ ಕೇಂದ್ರಗಳು ಇಲ್ಲದರಿಂದ ಮಹಿಳಾ ಕಂಡಕ್ಟರ್‌ಗಳು ಎದುರಿಸುವಂತಹ ಸಮಸ್ಯೆಗಳು

ಇ. ಪ್ರತ್ಯೇಕ ವಿಶ್ರಾಂತಿ ಸ್ಥಳ

ಈ. ಶೌಚಾಲಯದ ಸಮಸ್ಯೆ

ಉ. ವಸತಿಗೃಹ ವ್ಯವಸ್ಥೆ

೩.೧೦ ಮಹಿಳಾ ಕಂಡಕ್ಟರ್‌ಗಳಿಗೆ ಬಿಡುವಿನ ಸಮಸ್ಯೆ

## ಅಧ್ಯಾಯ ಮೂರು

# ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು

ಎಪ್ಪತ್ತರ ದಶಕದಲ್ಲಿ ಕಂಡಕ್ಟರ್ ಹುದ್ದೆಗೆ ಸೇರುವ ಮಹಿಳೆಯರ ಕುರಿತು ಯೋಚಿಸುವುದೇ ಕನಸಿನ ಮಾತಾಗಿತ್ತು. ಏಕೆಂದರೆ ಮಹಿಳೆಯರು ದುರ್ಬಲರು ಅವರಿಗೆ ಪರಿಶ್ರಮವಿರುವ ಕೆಲಸ ಮಾಡುವುದಕ್ಕೆ ಸಾಧ್ಯವಿಲ್ಲ. ಇವರು ಶಿಕ್ಷಕಿ, ದಾದಿಯಂತಹ ಕೆಲಸಗಳಿಗೆ ಮಾತ್ರ ಸೂಕ್ತವಾದವರು ಎಂಬುದು ಪುರುಷಪ್ರಧಾನ ಸಮಾಜದ ಕಲ್ಪನೆಯಾಗಿತ್ತು. ಕಂಡಕ್ಟರ್ ಕೆಲಸವನ್ನು ಪುರುಷರು ಮಾತ್ರ ಮಾಡುವುದಕ್ಕೆ ಸಾಧ್ಯ ಎಂಬುದು ಪುರುಷಪ್ರಧಾನ ವ್ಯವಸ್ಥೆಯ ಗ್ರಹಿಕೆಯಾಗಿತ್ತು. ಆದರೆ ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದಿಂದ ಮಹಿಳೆಯರು ಸಾರ್ವಜನಿಕ ಕ್ಷೇತ್ರವಾದ ಕಂಡಕ್ಟರ್ ಉದ್ಯೋಗಕ್ಕೆ ಕಾಲಿಡುತ್ತಿದ್ದಾರೆ.

ಬೂಟು, ಸೀಟಿ ಹುಡುಗರಿಗೆ ಮಾತ್ರ ಅಂದುಕೊಂಡಿದ್ದರು. ಆದರೆ ಇಂದು ಹುಡುಗಿಯರು ಖಾಕಿ ಹಾಕಿ ಕಂಡಕ್ಟರ್ ಉದ್ಯೋಗ ಮಾಡುತ್ತಿದ್ದಾರೆ. ಸೀಟಿ ಊದುತ್ತಾರೆ, ಚಲಿಸುತ್ತಿರುವ ಬಸ್‌ನಲ್ಲಿ ಭರಭರ ಓಡುಡುತ್ತಾ ಸರಸರ ದುಡ್ಡು ತೆಗೆದುಕೊಂಡು ಟಿಕೇಟ್ ಹರಿದುಕೊಟ್ಟು ಜನ ಜಂಗುಳಿಯನ್ನು ಸುಧಾರಿಸುತ್ತಾ ತರಲೆ ಮಾಡುತ್ತಿರುವವರನ್ನು ದಬಾಯಿಸುತ್ತಾ ನಿಂತು ಕೆಲಸ ಮಾಡುತ್ತಿದ್ದಾರೆ. ಕೆಎಸ್‌ಆರ್‌ಟಿಸಿ, ಬಿಎಂಟಿಸಿ ಎರಡರಲ್ಲಿಯು ಕಂಡಕ್ಟರ್‌ಗಳಾಗಿ ಕೆಲಸ ಮಾಡುತ್ತಿರುವವರು ಹೆಚ್ಚಾಗಿ ಹಳ್ಳಿಯಿಂದ ಬಂದಂತಹ ಮಹಿಳೆಯರೆ. ಅವರು ಎಂದು ಕಂಡಕ್ಟರ್ ಆಗುತ್ತೇನೆಂದು ಕನಸು ಕಂಡವರಲ್ಲ. ಪುರುಷರೊಂದಿಗೆ ಮಾರು ದೂರ ನಿಂತು ಮಾತನಾಡುತ್ತಿದ್ದವರು ಈಗ ಜನರ ಉಪ್ಪರಿಗೆಯಂತಿರುವ ಬಸ್‌ನಲ್ಲಿ ಬರಬರನೇ ಓಡಾಡುತ್ತಾ ಟಿಕೆಟು ಕೇಳದೆ ಕೈಕಟ್ಟಿ ಕುಳಿತವರಿಗೆ ದಬಾಯಿಸುತ್ತಾ ತಿಳುವಳಿಕೆಯನ್ನು ಹೇಳುತ್ತಾರೆ. ತೋಳಿಗೆ ಚರ್ಮದ ಚೀಲ ಕೊರಳಲ್ಲಿ ಟಿಕೇಟ್ ಮಿಶಿನ್ ಕೈಯಲ್ಲಿ ಸೀಟಿ ಹಿಡಿದುಕೊಂಡು ಬಸ್‌ನಲ್ಲಿ ಜನಜಂಗುಳಿ ಇರುವಾಗ ಎಲ್ಲರ ಮಧ್ಯೆ ನುಗ್ಗಿ ಯಾವುದೇ ಆತಂಕ, ಭಯವಿಲ್ಲದೆ ಕೆಲಸ ಮಾಡುತ್ತಿದ್ದಾರೆ.

ಮರಹತ್ತುವಂಥ ಕಠಿಣ ಕೆಲಸಗಳಿಗೆ ಸ್ತ್ರೀಯರ ಪ್ರಾಕೃತಿಗೆ ದೇಹ ಒಗ್ಗುವುದಿಲ್ಲ ಎಂಬುದು ಪುರುಷಪ್ರಧಾನ ಸಮಾಜದ ನಂಬಿಕೆ. ಆದರೆ ಇಂದು ಮಹಿಳಾ ಕಂಡಕ್ಟರ್‌ಗಳು ಈ ಒಂದು ಗ್ರಹಿಕೆಯನ್ನು ಸುಳ್ಳು ಮಾಡುತ್ತಿದ್ದಾರೆ. ಪ್ರಯಾಣಿಕರು ಬಸ್‌ಗಳ ಮೇಲೆ ಕೂತಾಗ ಬಸ್ ಮೇಲೆ ಹತ್ತಿ ಟಿಕೇಟ್ ತೆಗೆದುಕೊಳ್ಳುತ್ತಾರೆ. ಚಲಿಸುತ್ತಿರುವ ಬಸ್‌ಗಳಲ್ಲಿ ಭರ ಭರ ಓಡಾಡುತ್ತಾ ಸರಸರ ದುಡ್ಡು ಪಡೆದು ಟಿಕೇಟ್ ಹರಿದು ನೀಡುವ ಮಹಿಳಾ ಕಂಡಕ್ಟರ್‌ಗಳ ಕೆಲಸ ಕಣ್ಣಿಗೆ ಕಾಣುವಷ್ಟೇ ಸರಳವಾಗಿಲ್ಲ. ಇವರು ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಸಮಾಜದಲ್ಲಿ ಪುರುಷ ಕಂಡಕ್ಟರ್‌ಗಳಿಗೆ ಸಿಗುವಷ್ಟು ಗೌರವ ಸ್ಥಾನಮಾನ ಇವರಿಗೆ ಸಿಗುತ್ತಿಲ್ಲ. ಕಂಡಕ್ಟರ್ ಕೆಲಸಕ್ಕೆ ಬರುವ ಮಹಿಳೆಯರು ಮರ್ಯಾದಸ್ಥ ಕುಟುಂಬದವರಲ್ಲ ಎಂಬ ತಪ್ಪು ತಿಳುವಳಿಕೆಯಿಂದ ಈ ಕೆಲಸವನ್ನು ಮಾಡುವ ಹೆಣ್ಣು ಮಕ್ಕಳನ್ನು ತಮ್ಮ ಮನೆಯ ಸೊಸೆಯಾಗಿ ಮತ್ತು ಹೆಂಡತಿಯಾಗಿ ಸ್ವೀಕರಿಸುವುದಕ್ಕೆ ಹಿಂದು-ಮುಂದು ನೋಡುತ್ತಾರೆ.

ಈ ಕೆಲಸ ಮಾಡುವ ಹೆಣ್ಣು ಮಕ್ಕಳ ಪುರುಷ, ಸಹೋದ್ಯೋಗಿಗಳ ಜೊತೆ ಕೆಲಸ ಮಾಡುವುದರಿಂದ ಅವರ ಶೀಲದ ಬಗ್ಗೆ ಅನುಮಾನ ಪಡುತ್ತಾರೆ. ಹೊರಗೆ ೧೩-೧೪ ತಾಸು ಕೆಲಸ ಮಾಡುವುದಲ್ಲದೆ ಮನೆಗೆ ಬಂದು ಅಡುಗೆ ಮನೆಕೆಲಸ ಹಿರಿಯರ ಸೇವೆ ಇವರೇ ಮಾಡಬೇಕಾಗಿರುವುದರಿಂದ ಗೃಹಿಣಿ ಮತ್ತು ತಾಯಿಯಾಗಿ ದ್ವಿಭಾರಕ್ಕೆ ಒಳಗಾಗಿದ್ದಾರೆ. ಸಂಬಳವನ್ನು ಗಂಡ ಅಥವಾ ತಂದೆ, ಅಣ್ಣನ ಕೈಯಲ್ಲಿಟ್ಟು ತನ್ನ ಸ್ವಂತ ಖರ್ಚಿಗಾಗಿ ಪುರುಷರ ಮುಖ ನೋಡಬೇಕಾಗಿದೆ. ತಮ್ಮ ನ್ಯಾಯಬದ್ಧ ಹಕ್ಕುಗಳನ್ನು ಆರ್ಥಿಕ ಸ್ವಾವಲಂಬನೆ ಇದ್ದಾಗಲೂ ಅಸಹಾಯಕರಾಗಿದ್ದಾರೆ. ಕೆಲಸ ಮಾಡಿ ಸುಸ್ತಾಗಿ ಬಂದಾಗ ಗಂಡನಾದವನು ಇಷ್ಟಪಟ್ಟರೆ ಅವನಿಗೆ ಲೈಂಗಿಕವಾಗಿ ತೃಪ್ತಿಪಡಿಸಬೇಕು. ಈ ಕೆಲಸ ಯಾವಾಗಲೂ ಒತ್ತಡವಾದಂತಹ ಕೆಲಸವಾಗಿರುವುದರಿಂದ ನಿರಂತರವಾಗಿ ನಿಂತುಕೊಂಡೆ ಕೆಲಸ ಮಾಡುವುದರಿಂದ ಗರ್ಭಿಣಿಯಾದಾಗ ಮೊದಲ ಮೂರು ತಿಂಗಳಲ್ಲಿ ವಿಶ್ರಾಂತಿ ಇಲ್ಲದೆ ನಿರಂತರವಾಗಿ ಕೆಲಸ ಮಾಡುವುದರಿಂದ ಗರ್ಭಪಾತದಂತಹ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕುಡಿಯಲು ಶುದ್ಧವಾದ ನೀರು ಇಲ್ಲದಿದ್ದರಿಂದ ಆರೋಗ್ಯದಲ್ಲಿ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇವರಿಗೆ ಹೆರಿಗೆ ರಜೆ ೩ ತಿಂಗಳು ಮಾತ್ರ ಕೊಡುವುದರಿಂದ ಬಾಣಂತಿ ಇರುವಾಗಲೇ ಕೆಲಸಕ್ಕೆ ಬರುವ ಅನಿವಾರ್ಯತೆ ಇರುವುದರಿಂದ ಗಾಳಿಗೆ ತಲೆನೋವು, ಹೊಟ್ಟೆನೋವು, ಜ್ವರ ಇನ್ನೂ ಮುಂತಾದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಸಾರ್ವಜನಿಕ ವಲಯದಲ್ಲಿ ಕಾಲಿಟ್ಟ ಮಹಿಳಾ ಕಂಡಕ್ಟರ್‌ಗಳ ಮೊದಲ ಸಮಸ್ಯೆ ಈ ಪುರುಷ ವರ್ಗದವರೊಡನೆ ಸ್ಪರ್ಧಿಸಬೇಕಾದುದು. ಆಕೆ ಪುರುಷರಷ್ಟೇ ಸಮರ್ಥವಾಗಿ ಅವರಿಗಿಂತ ತುಂಬಾ ನಿಷ್ಠೆಯಿಂದ ಕೆಲಸ ಮಾಡುತ್ತಿದ್ದಾರೆ. ಮಹಿಳೆಯರು ಈತನ ಕೆಲಸಕ್ಕೆ ಬಂದಿರುವುದು ಪುರುಷರಿಗೆ ನುಂಗಲಾರದ ತುತ್ತಾಗಿದೆ. ಅವರಿಗೆ ಕೆಲಸದಲ್ಲಿ ಅನೇಕ ನಿರ್ಬಂಧಗಳನ್ನು ಹಾಕಿದ್ದಾರೆ. ಮಹಿಳಾ ಕಂಡಕ್ಟರ್‌ಗಳನ್ನು ರಾತ್ರಿಪಾಳಿ ಕೆಲಸಕ್ಕೆ ಹಾಕಿದರೆ ಅವರಿಗೆ ಉಳಿದುಕೊಳ್ಳುವುದಕ್ಕೆ ಇನ್ನಿತರ ಸೌಲಭ್ಯಗಳನ್ನು ಒದಗಿಸಿಕೊಡಬೇಕಾಗುತ್ತದೆ ಎಂದು ಅವರನ್ನು ಹಾಕುವುದಿಲ್ಲ.

ಸಹೋದ್ಯೋಗಿಗಳು ಇವರ ಜೊತೆ ಕೆಲಸ ಮಾಡುವ ಮಹಿಳೆಯರನ್ನು ಸಹೋದ್ಯೋಗಿಗಳೆಂದು ಕಾಣದೆ ಒಂದು ಹೆಣ್ಣು ಎನ್ನುವ ದೃಷ್ಟಿಯಿಂದಲೇ ಕಾಣುತ್ತಾರೆ. ಮಹಿಳಾ ಕಂಡಕ್ಟರ್‌ಗಳು ಕೂಡ ಹೆಣ್ಣು ಎಂಬ ಕಾರಣಕ್ಕಾಗಿಯೇ ಪ್ರಯಾಣಿಕರಿಂದ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ, ಎಂಬುದು ಸ್ಪಷ್ಟವಾಗಿ ಗೋಚರಿಸುತ್ತವೆ. ಈ ಎಲ್ಲಾ ಸಮಸ್ಯೆಗಳನ್ನು ವಿವರಿಸುವಂತಹ ಅಗತ್ಯವಿದೆ. ಆದ್ದರಿಂದ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಹೊಸಪೇಟೆ ಡಿಪೋದಲ್ಲಿ ಕಾರ್ಯನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳು ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ನಾನು ಈ ಪ್ರಬಂಧದಲ್ಲಿ ಹೇಳಲು ಪ್ರಯತ್ನಿಸುತ್ತಿದ್ದೇನೆ.

### ೩.೧ ಸಮಾಜದ ದೃಷ್ಟಿಯಲ್ಲಿ ಮಹಿಳಾ ಕಂಡಕ್ಟರ್‌ಗಳು :

ಸಮಾಜದಲ್ಲಿ ಪುರುಷ ಕಂಡಕ್ಟರ್‌ಗಳಿಗೆ ಸಿಗುವಷ್ಟು ಗೌರವ ಸ್ಥಾನಮಾನ ಮಹಿಳಾ ಕಂಡಕ್ಟರ್‌ಗಳಿಗೆ ಸಿಗುತ್ತಿಲ್ಲ. ಈ ಸಮಾಜ ನಮ್ಮನ್ನು ಕಂಡಕ್ಟರ್ ಎನ್ನುವ ದೃಷ್ಟಿಯಿಂದ ನೋಡದೆ ನಾವು ಒಂದು ಹೆಣ್ಣು ಅಂದರೆ ಭೋಗದ ವಸ್ತು ಎನ್ನುವ ರೀತಿಯಿಂದಲೇ ನೋಡುತ್ತಾರೆ. ಕಂಡಕ್ಟರ್ ವೃತ್ತಿಯಲ್ಲಿರುವ ಮಹಿಳೆಯರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಇಷ್ಟವಾಗುವುದಿಲ್ಲ ಎಂದು ಉತ್ತಮ ಮತ್ತು ಮಧ್ಯಮ ವರ್ಗದ ಉದ್ಯೋಗಸ್ಥ ಪುರುಷರು ಹೇಳುತ್ತಾರೆ. ಇಂತವರನ್ನು ಮಾಡಿಕೊಂಡರೆ ನನ್ನ ಸಹೋದ್ಯೋಗಿಗಳಲ್ಲಿ ನನ್ನ ಸ್ಥಾನ ಏನಾಗಬೇಕು. ಈ ಕೆಲಸ ಮಾಡುವ ಮಹಿಳೆಯರು ದಿನದ ಹೆಚ್ಚಿನ ಸಮಯ ಕೆಲಸದಲ್ಲಿಯೇ ನಿರತರಾಗಿರುತ್ತಾರೆ. ಬೆಳಿಗ್ಗೆ ಡ್ಯೂಟಿಗೆ ಹೋದರೆ ರಾತ್ರಿ ಬರುವುದು ಎಷ್ಟೊತ್ತು ಆಗುತೋ ಗೊತ್ತಿಲ್ಲ. ಮನೆಯಲ್ಲಿ ವಯಸ್ಸಾದ ತಂದೆ-ತಾಯಿಯನ್ನು ನೋಡಿಕೊಳ್ಳುವವರು ಯಾರು? ಇವರು ಪುರುಷರ ಜೊತೆನೇ ಕೆಲಸ ಮಾಡುವುದರಿಂದ ಇಂತವರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಇಷ್ಟವಾಗುವುದಿಲ್ಲ ಎಂದು ಹೇಳಿದರು. ಹಿರಿಯರ ದೃಷ್ಟಿಯಲ್ಲಿ ಕಂಡಕ್ಟರ್ ಕೆಲಸ ಮಾಡುತ್ತಿರುವವಳು ಸೊಸೆಯಾದರೆ ಮರ್ಯಾದೆಯಿಂದ ಮನೆತನವನ್ನು ನಡೆಸಲಿಕ್ಕೆ ಅನರ್ಹಳು ಎಂದು ಕೆಲವು ಹಿರಿಯರು ಹೇಳಿದರು. ಕಂಡಕ್ಟರ್ ವೃತ್ತಿಗೆ ಬರುವವರು ಮಾನ-ಮರ್ಯಾದೆ ಇರುವಂತಹ ಮಹಿಳೆಯರಲ್ಲ, ಮಾನ ಮರ್ಯಾದೆ ಬಿಟ್ಟವರು ಇಂತಹ ಕೆಲಸಕ್ಕೆ ಬರುತ್ತಾರೆ ಎಂದು ಕೆಲವು ಜನರು ಹೇಳಿದರು. ಇನ್ನು ಮುಸ್ಲಿಂ ಸಮುದಾಯದ ಮಹಿಳೆಯರು ಇಂತಹ ಕೆಲಸಕ್ಕೆ ಬರಬಾರದು. ಅದು ನಮ್ಮ ಜಾತಿಗೆ ಅವಮಾನವೆಂದು ಹೇಳಿದರು.

ಕೆಲಸದ ಸ್ಥಳದಲ್ಲಿ ಮೇಲಾಧಿಕಾರಿಗಳು ತಮ್ಮ ಕೈಕೆಳಗೆ ಕೆಲಸ ಮಾಡುತ್ತಿರುವ ಮಹಿಳೆಯರು ತಮಗೆ ಸಂಪೂರ್ಣವಾಗಿ ಶರಣಾಗಬೇಕೆಂದು ಹೇಳುತ್ತಾರೆ. ಇಂತಹ ಮಹಿಳೆಯರು ಸುಲಭವಾಗಿ ಶರಣಾಗತಿಯಾಗದಿದ್ದರೆ ಅವಳ ಉದ್ಯೋಗ ಖಾಯಂ ಆಗುವುದು ಸಾಧ್ಯವಿಲ್ಲ. ಅವಳಿಗೆ ಬಡ್ತಿ ಕೂಡ ದೊರೆಯಲಾರದು. ಇಷ್ಟೇ ಅಲ್ಲದೆ ಅವಳಿಗೆ ಹಲವಾರು ಕಿರುಕುಳ ಉಪದ್ರವಗಳನ್ನು ನೀಡಲಾಗುತ್ತದೆ. ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಪುರುಷ ಸಹೋದ್ಯೋಗಿಗಳ ಬಗೆಗೆ ಅಸಮಾಧಾನ ವ್ಯಕ್ತಪಡಿಸುತ್ತಾರೆ.

ಪುರುಷರು ತಮ್ಮ ಜೊತೆಗೆ ಕೆಲಸ ಮಾಡುವ ಮಹಿಳೆಯನ್ನು ಸಹೋದ್ಯೋಗಿ ಎಂದು ಕಾಣದೆ 'ಹೆಣ್ಣು' ಎಂದೇ ಕಾಣುತ್ತಾರೆ. ಅವರು ನಮ್ಮ ಜೊತೆಗೆ ಗಂಭೀರವಾಗಿ ಇರುವುದಿಲ್ಲ ಹಾಗೂ ಗೌರವದಿಂದ ನಡೆದುಕೊಳ್ಳುವುದಿಲ್ಲ.

ಸ್ತ್ರೀ ಲೈಂಗಿಕವಾಗಿ ಪರಿಶುದ್ಧಳಾಗಿರಲೇಬೇಕೆಂದು ಸಾಮಾಜಿಕವಾಗಿ ಅಪೇಕ್ಷಿಸಲಾಗುತ್ತದೆ. ಎಷ್ಟೋ ಸಲ ಮಹಿಳಾ ಕಂಡಕ್ಟರ್‌ಗಳು ಪುರುಷ ಸಹೋದ್ಯೋಗಿಯೊಡನೆ 'ಬಿಚ್ಚು ಮನಸ್ಸಿನಿಂದ' ವರ್ತಿಸಿದರೆ ಅವಳನ್ನು ಉಳಿದವರು ಕೀಳು ದೃಷ್ಟಿಯಿಂದ ನೋಡುತ್ತಾರೆ. ಅವಳ ಚಾರಿತ್ರ್ಯವನ್ನು ಪ್ರಶ್ನಿಸುತ್ತಾರೆ. ಅವಳ ಬಗ್ಗೆ ಇಲ್ಲಸಲ್ಲದ ಆರೋಪಗಳನ್ನು ಮಾಡುತ್ತಾರೆ. ಮಹಿಳೆಯರು ಈ ಕೆಲಸಕ್ಕೆ ಬಂದಾಗ ಪ್ರಾರಂಭದಲ್ಲಿ ಮಹಿಳೆಯರು ಕೂಡ ಜನರ ಸೇವೆಯನ್ನು ಮಾಡಬಹುದು. ಸಮಾಜ ನಮ್ಮನ್ನು ಕಂಡಕ್ಟರ್ ಎನ್ನುವ ದೃಷ್ಟಿಯಿಂದ ನೋಡುತ್ತದೆ ಎಂದು ಅಂದುಕೊಂಡಿದ್ದೇವೆ. ಆದರೆ ಪ್ರಯಾಣಿಕರು ಮಹಿಳಾ ಕಂಡಕ್ಟರ್‌ಗಳ ಜೊತೆ ವರ್ತಿಸುವುದನ್ನು ನೋಡಿದರೆ ಹೆಣ್ಣು ಇರುವುದೇ ಲೈಂಗಿಕ ಉಪಭೋಗಕ್ಕಾಗಿ ಎನ್ನುವ ರೀತಿಯಲ್ಲಿ ವರ್ತಿಸುತ್ತಾರೆ. ಸಮಾಜದಲ್ಲಿ ಮಹಿಳೆಯರನ್ನು ಕಂಡಕ್ಟರ್ ಎಂದು ಒಪ್ಪಿಕೊಳ್ಳದೇ ಇರುವುದು ಕಂಡುಬರುತ್ತದೆ. ಉದ್ಯೋಗ ಕ್ಷೇತ್ರದಲ್ಲಿ ಪುರುಷರ ಹಾಗೂ ಮಹಿಳೆಯರ ಉದ್ಯೋಗಗಳೆಂಬ ವಿಂಗಡಣೆಯೂ ಕಂಡುಬರುತ್ತದೆ. ಪುರುಷರು ಯಾವತ್ತು ಬಲಶಾಲಿಗಳು ಅದರ ಚಲಾಯಿಸುವ ಹಾಗೂ ನಿರ್ಧಾರ ಕೈಗೊಳ್ಳುವ ವೃತ್ತಿಯಲ್ಲಿರಬೇಕೆಂಬ ಮನೋಭಾವದ ಜೊತೆಗೆ ಸ್ತ್ರೀಯರು ಯಾವಾಗಲೂ ಅಬಲೆಯರಾಗಿದ್ದು ಅಧೀನ ವೃತ್ತಿಯಲ್ಲಿರಬೇಕೆಂಬ ದೃಷ್ಟಿಯೂ ಕಂಡುಬರುತ್ತವೆ.

### ಅ. ಎರಡನೇ ದರ್ಜೆಯ ವೃತ್ತಿಯಾಗಿ :

ಪುರುಷರಿಗಿಂತಲೂ ಮಹಿಳೆಯರಿಗೆ ಈ ವೃತ್ತಿಯಲ್ಲಿ ಪ್ರಮುಖ ಸ್ಥಾನ ಕಲ್ಪಿಸಿಲ್ಲ. ಈ ಕ್ಷೇತ್ರ ಸಾರ್ವಜನಿಕ ವಲಯವಾದ್ದರಿಂದ ದಿನದ ಹೆಚ್ಚು ಗಂಟೆಗಳು ಸಾರ್ವಜನಿಕರ ಮಧ್ಯನೇ ಇರಬೇಕು. ಆದರೆ ನಮ್ಮ ಸಮಾಜ ಮಹಿಳೆಯರನ್ನು ೪ ಗೋಡೆಗಳ ಮಧ್ಯೆ ಇದ್ದರೆ ಮಾತ್ರ ಗೌರವ ಕೊಡುತ್ತದೆ. ಅವಳು ಜನರ ಮಧ್ಯೆ ಬಂದು ಕೆಲಸ ಮಾಡಬೇಕಾಗಿರುವ ಈ ಉದ್ಯೋಗಕ್ಕೆ ಬಂದರೆ ಸಮಾಜದ ಮನ್ನಣೆಯಲ್ಲಿ ಅವಳ ಸ್ಥಾನ ಎರಡನೇ ದರ್ಜೆಯ ಕಡೆಗೆ ಸರಿಯುತ್ತಿದೆ. ಆದ್ದರಿಂದ ಮಹಿಳೆಯರ ಈ ಬಗೆಯ ಕೆಲಸ ನಿರ್ವಹಣೆಯನ್ನು ಗೌರವಿಸುವುದಿಲ್ಲ. ಇಂತಹ ಕ್ಷೇತ್ರಗಳಲ್ಲಿ ಪುರುಷರು ಕೆಲಸ ನಿರ್ವಹಿಸುತ್ತಿದ್ದರೆ ಅವರಿಗೆ ಸಮಾಜದಲ್ಲಿ ಸಿಗುವಷ್ಟು ಗೌರವ ಮರ್ಯಾದೆ ಮಹಿಳೆಯರಿಗೆ ಸಿಗುತ್ತಿಲ್ಲ. ಈ ಕೆಲಸ ಪುರುಷ ಮಾಡುವುದಕ್ಕೆ ಮಾತ್ರ ಸೂಕ್ತ ಎಂಬ ಅಭಿಪ್ರಾಯ ಸಮಾಜದ್ದು. ಆದ್ದರಿಂದ ಅವಳು ಕೆಲಸ ನಿರ್ವಹಿಸುವಂತಹ ಉದ್ಯೋಗಕ್ಕೆ ಪ್ರೋತ್ಸಾಹ ಕೊಡುತ್ತಿಲ್ಲ. ಈ ಉದ್ಯೋಗದ ಬಗ್ಗೆ ಇರುವ ಕೀಳು ಮನೋಭಾವನೆಯನ್ನು ಜನರ ಮನಸ್ಸಿನಿಂದ ತೊಡೆದು ಹಾಕಿದಾಗ ಮಾತ್ರ ಈ ವೃತ್ತಿಗೆ ಮನ್ನಣೆ ದೊರೆಯುತ್ತದೆ.

ಕಂಡಕ್ಟರ್‌ಗಳ ವೈಯಕ್ತಿಕ ಜೀವನದ ಬಗ್ಗೆ ತೆಗೆದುಕೊಂಡರೆ, ಪ್ರತಿಯೊಂದು ಇಲಾಖೆಯಲ್ಲಿ ಕೆಲಸ ಮಾಡುವ ಮಹಿಳೆಗೆ ಹಣದಲ್ಲಾಗಲಿ, ವಿದ್ಯೆಯಲ್ಲಾಗಲಿ, ಉದ್ಯೋಗದಲ್ಲಾಗಲಿ ಮನೆತನದ ಹಿರಿಯರ ದೃಷ್ಟಿಯಲ್ಲಾಗಲಿ ಉತ್ತಮ ಪತಿ ದೊರೆಯಬಲ್ಲ. ಆದರೆ ಕಂಡಕ್ಟರ್‌ಗಳಿಗೆ ಎಂದಿಗೂ ಸಹ ಉತ್ತಮ ಪತಿ ದೊರೆಯಲಾರ ಅಂದರೆ ಸಮಾಜದಲ್ಲಿ ಮನ್ನಣೆಯನ್ನೇ ಪಡೆಯದೆ ಇರುವ ಈ ವೃತ್ತಿಯಲ್ಲಿ ಇರುವ ಮಹಿಳೆಯರನ್ನು ಕುಟುಂಬದಲ್ಲಿ ಗೌರವದಿಂದ ಕಾಣುವುದಿಲ್ಲ. ಹೀಗಾಗಿ ಈ ಉದ್ಯೋಗಕ್ಕೆ ಮೇಲ್ಜಾತಿಯ ಮಹಿಳೆಯರು ಬೆರಳೆಣಿಕೆಯಷ್ಟು ಮಾತ್ರ ಕೆಳಜಾತಿಯ ಮಹಿಳೆಯರು ಮಾತ್ರ ಹೆಚ್ಚಾಗಿ ಕಂಡಕ್ಟರ್ ಉದ್ಯೋಗದಲ್ಲಿ ಇರುವುದು ಕಂಡುಬರುತ್ತದೆ.

### ಆ. ಸಾಂಪ್ರದಾಯಿಕ ದೃಷ್ಟಿಯಲ್ಲಿ :

ಈ ಉದ್ಯೋಗಕ್ಕೆ ಸಂಪ್ರದಾಯಸ್ಥ ಹೆಣ್ಣುಮಕ್ಕಳು ಬರುತ್ತಿಲ್ಲ. ಕಾರಣ ಇದು ಸಮಾಜದಲ್ಲಿ ಕೆಳದರ್ಜೆಯ, ಕೀಳು ಎಂಬ ಭಾವನೆ ಹೊಂದಿದೆ. ಸಾಂಪ್ರದಾಯಸ್ಥ ಕುಟುಂಬದ ಹೆಣ್ಣುಮಕ್ಕಳು ಈ ಉದ್ಯೋಗ ಮಾಡಿದರೆ ಕುಟುಂಬದ ಗೌರವಕ್ಕೆ ದಕ್ಕೆ ಬಂದಂತೆ. ಏಕೆಂದರೆ ಬಸ್‌ಗಳಲ್ಲಿ ಸಾರ್ವಜನಿಕರ ಮಧ್ಯೆ ಓಡಾಡಬೇಕಾಗುತ್ತದೆ. ಪರಪುರುಷರನ್ನು ಮುಟ್ಟಬೇಕು, ಮಾತನಾಡಬೇಕು ಅವರ ಜೊತೆ ಹೆಚ್ಚಿನ ಸಮಯ ಕೆಲಸ ಮಾಡಬೇಕಾಗಿರುವುದರಿಂದ ಕಂಡಕ್ಟರ್ ಕೆಲಸ ಮಾಡುವುದು ಮಹಿಳೆಯರ ಗೌರವ ನಾಶವಾಗುತ್ತದೆ ಎಂಬ ಗ್ರಹಿಕೆ ಈ ಸಮಾಜದ್ದು.

ಮುಸ್ಲಿಂ ಧರ್ಮವು ತಮ್ಮ ಮಹಿಳೆಯರಿಗಾಗಿ ಕೆಲವು ಕಡ್ಡಾಯ ನಿಯಮಗಳನ್ನು ಜಾರಿಮಾಡಿದೆ. ಸಾರ್ವಜನಿಕ ಜೀವನದಲ್ಲಿ ಮಹಿಳೆಯರು ಹಾಜರಾಗುವುದನ್ನು ನಿಷೇಧಿಸುವ ಕಾಯ್ದೆ ಮನೆಯ ಒಳಗೆ ತಂದೆ, ಗಂಡ ಹಾಗೂ ಸಹೋದರರನ್ನು ಹೊರತಾಗಿ ಮಹಿಳೆಯರು ಬೇರೆಯವರ ಅಂದರೆ ಅಪರಿಚಿತರ ಮುಂದೆ ಹಾದು ಹೋಗವಂತಿಲ್ಲ. ಈ ರೀತಿಯ ನಿಯಮಗಳು ಮುಸ್ಲಿಂ ಸಮುದಾಯದ ಮಹಿಳಯರಿಗೆ ಇದ್ದರೂ ಇತ್ತೀಚಿನ ದಿನಗಳಲ್ಲಿ ಸಂಸಾರ ನಿರ್ವಹಣೆಗಾಗಿ, ಮಕ್ಕಳ ಭವಿಷ್ಯಕ್ಕಾಗಿ ಹಾಗೂ ಕುಟುಂಬದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ದೃಷ್ಟಿಯಿಂದ ಮುಸ್ಲಿಂ ಮಹಿಳೆಯರು ಕಂಡಕ್ಟರ್ ಉದ್ಯೋಗಕ್ಕೆ ಅನಿವಾರ್ಯವಾಗಿ ಬಂದವರಾಗಿದ್ದಾರೆ. ಆದರೆ ಈ ಸಮುದಾಯದವರು ಮಾತ್ರ ಮಹಿಳಾ ಕಂಡಕ್ಟರನ್ನು ಮತ್ತು ಅವರ ಕುಟುಂಬವನ್ನು ಕೀಳು ದೃಷ್ಟಿಯಿಂದ ನೋಡುತ್ತಾರೆ. ಯಾವುದಾದರೂ ಸಾಂಪ್ರದಾಯಿಕ ಕಾರ್ಯಗಳಲ್ಲಿ ಭಾಗವಹಿಸುವುದಕ್ಕೆ ಕರೆಯಲು ಹಿಂದು ಮುಂದು ನೋಡುತ್ತಾರೆ ಎಂದು ನನ್ನ ಸಂಶೋಧನಾ ಅಧ್ಯಯನದಲ್ಲಿ ಬರುವ ಅಪಸರ್ ಜಾನ್ ಮತ್ತು ಶಬಾನಾ ಎಂಬ ಇಬ್ಬರು ಮಹಿಳಾ ಕಂಡಕ್ಟರ್‌ಗಳು ತಮ್ಮ ಅನುಭವವನ್ನು ಹೇಳಿಕೊಂಡಿದ್ದಾರೆ.

### ಇ. ಹಿಂದೂ ಸಂಪ್ರದಾಯ :

ಸ್ತ್ರೀಯರು ದೈಹಿಕ ದುರ್ಬಲರು ಕಠಿಣವಾದ ಶ್ರಮದಿಂದ ಕೂಡಿದ ಯಾವುದೇ ಕೆಲಸವನ್ನು ಅವರಿಗೆ ನೀಡಬಾರದು. ಗೃಹಕೃತ್ಯವು ಅವರಿಗೆ ಮೀಸಲಾಗಿರುವ ಕೆಲಸ. ಆದ್ದರಿಂದ ಹೆಣ್ಣುಮಕ್ಕಳಿಗೆ ಈ ಕಂಡಕ್ಟರ್

ಉದ್ಯೋಗವು ದೈಹಿಕವಾಗಿ, ಮಾನಸಿಕವಾಗಿ ತುಂಬಾ ಶ್ರಮದಿಂದ ಕೂಡಿರುವುದರಿಂದ ಅವರು ಈ ಕೆಲಸವನ್ನು ಮಾಡಬಾರದು. ಅದು ಪುರುಷರು ಮಾಡುವಂತಹ ಕೆಲಸಗಳು ಹೊಂದುವುದರಿಂದ ಎಂಬ ನಂಬಿಕೆಯನ್ನು ಕೆಲವು ಮಹಿಳಾ ಕಂಡಕ್ಟರ್‌ಗಳ ತಂದೆ-ತಾಯಿಳು ಹೊಂದಿರುವುದರಿಂದ ತಮ್ಮ ಮಗಳು ಈ ಕೆಲಸ ಮಾಡುವುದು ಅವರಿಗೆ ಸಂತೋಷದ ವಿಷಯವಲ್ಲ. ನನ್ನ ಸಂಶೋಧನಾ ಅಧ್ಯಯನದಲ್ಲಿ ಬರುವ ಶಿವಮ್ಮ ಅವರ ತಂದೆ-ತಾಯಿಗಳ ಅಭಿಪ್ರಾಯವಾಗಿದೆ.

"ಸ್ತ್ರೀಯರು ಚಂಚಲ ಮನಸ್ಕರು, ಅವರು ಸಣ್ಣ ಪುಟ್ಟ ಆಮಿಷಗಳಿಗೆ ಬಲಿಬೀಳುತ್ತಾರೆ. ಪುರುಷರನ್ನು ಮೋಹಗೊಳಿಸುವುದೇ ಸ್ತ್ರೀಯ ಸ್ವಭಾವ ಆದ್ದರಿಂದಲೇ ಮೂರ್ಖನಷ್ಟೇ ಅಲ್ಲ ವಿದ್ವಾಂಸನನ್ನು ಕೂಡ ಸ್ತ್ರೀಯರು ಅಡ್ಡದಾರಿ ಹಿಡಿಸಬಲ್ಲರು" ಆದ್ದರಿಂದ ಕಂಡಕ್ಟರ್ ಉದ್ಯೋಗ ಸಾರ್ವಜನಿಕ ಕ್ಷೇತ್ರವಾಗಿರುವುದರಿಂದ ಮಹಿಳೆಯರನ್ನು ಜೊತೆ ಇರುವುದಕ್ಕೆ ಬಿಡಬಾರದು - ಅವರ ಮನಸ್ಸು ತುಂಬಾ ಚಂಚಲ. ಅವಳ ಮನಸ್ಸು ಪರಪುರಷರ ಕಡೆ ಒಲವು ತೋರಿಸಬಹುದು. ಆದ್ದರಿಂದ ಮಹಿಳೆಯರು ಕಂಡಕ್ಟರ್ ಉದ್ಯೋಗಕ್ಕೆ ಬರುವುದು ಒಳ್ಳೆಯದಲ್ಲ ಎಂದು ಕೆಲವು ಪ್ರಯಾಣಿಕರು ಹೇಳುತ್ತಾರೆ.

ತಂದೆ-ಗಂಡ ಮಕ್ಕಳನ್ನು ಹೊರತು ತಾನು ಒಂಟಿಯಾಗಿದ್ದರೆ ಹೆಂಗಸಾದ ತನ್ನ ಮನಸ್ಸನ್ನು ಮತ್ತು ದೇಹವನ್ನು ಪರ ಪುರುಷರು ಆಕ್ರಮಿಸುವ ಸಂಭವವು ಬಹಳವಿರುತ್ತದೆ. ಎಂದು ಮನು ಹೇಳುತ್ತಾನೆ. ಕಂಡಕ್ಟರ್‌ಗಳು ಹೆಚ್ಚಾಗಿ ಪುರುಷ ಸಹೋದ್ಯೋಗಿಗಳ ಜೊತೇನೆ ಹೆಚ್ಚು ಸಮಯ ಕೆಲಸ ಮಾಡಬೇಕಾಗಿರುವುದರಿಂದ ಇಂತಹ ಸಂದರ್ಭಗಳು ಏರ್ಪಡಬಹುದು ಆದ್ದರಿಂದ ಮಹಿಳೆಯರನ್ನು ಕಂಡಕ್ಟರ್ ಕೆಲಸಕ್ಕೆ ಕಳುಹಿಸಲು ಹಿಂದು ಮುಂದು ನೋಡಬೇಕಾಗುತ್ತದೆ ಎಂದು ಕೆಲವು ಪ್ರಯಾಣಿಕರು ಹೇಳಿದರು.

### ಈ. ಸಹೋದ್ಯೋಗಿಗಳ ದೃಷ್ಟಿಯಲ್ಲಿ ಮಹಿಳಾ ಕಂಡಕ್ಟರ್‌ಗಳು :

#### ೧. ಕಂಟ್ರೋಲರ್ :

ಕಂಡಕ್ಟರ್ ಕೆಲಸ ಹೆಣ್ಣುಮಕ್ಕಳು ಮಾಡುವಂತಹ ಕೆಲಸವಲ್ಲ. ಏಕೆಂದರೆ ಈ ಕೆಲಸಕ್ಕೆ ಬರುವವರು ತುಂಬಾ ಗಟ್ಟಿ ಆಗಿರುವವರು ಮಾತ್ರ ಮಾಡಲು ಸಾಧ್ಯ. ಅಂತಹದರಲ್ಲಿ ಹೆಣ್ಣುಮಕ್ಕಳು ತುಂಬಾ ಮೃದು ಸ್ವಭಾವದವರು, ಇಂತಹ ಕೆಲಸ ಮಾಡುವುದಕ್ಕೆ ಅವರಿಗೆ ಕಷ್ಟವಾಗುತ್ತಿದೆ. ಬೆಳಿಗ್ಗೆ ಕೆಲಸಕ್ಕೆ ಹೋದರೆ ರಾತ್ರಿ ಬರುವುದು ಎಷ್ಟೋತು, ಆಗುತ್ತೋ ಗೊತ್ತಿಲ್ಲ. ತಂದೆ-ತಾಯಿ, ಗಂಡ, ಮಕ್ಕಳು ಇವರು ಬರುವುದು ತಡವಾದರೆ ಟೆನ್ಷನ್ ಮಾಡಿಕೊಳ್ಳುತ್ತಾರೆ. ಆದರೆ ಗಂಡು ಮಕ್ಕಳು ಎಷ್ಟೊತ್ತಿಗಾದರೂ ಬರಲಿ ಅವರಿಗೆ ಅವರ ಬಗ್ಗೆ ಗಾಬರಿ ಆಗುವುದಿಲ್ಲ ಎಂದು ಹೇಳುತ್ತಾರೆ. ಮಧ್ಯದಲ್ಲಿ ಬಸ್ ಕೆಟ್ಟು ಹೋದರಂತೂ ರಾತ್ರಿ ಮನೆಗೆ ಬರುವುದು ರಾತ್ರಿ ೧-೨ ಗಂಟೆಯಾಗಬಹುದು. ಹೆಣ್ಣುಮಕ್ಕಳು ಅಷ್ಟೊತ್ತಿನಲ್ಲಿ ಮನೆಗೆ

ಬಂದರೆ ಅಕ್ಕಪಕ್ಕದವರು ಅವಳ ಬಗ್ಗೆ ಮಾತನಾಡಿಕೊಳ್ಳುವುದೇ ಬೇರೆ. ಈ ರೀತಿಯಾಗುವುದರಿಂದ ಮುಂದೆ ಅವರ ಮದುವೆಗೆ ತೊಂದರೆಯಾಗುತ್ತದೆ. ಆದ್ದರಿಂದ ಹೆಣ್ಣುಮಕ್ಕಳು ಕಂಡಕ್ಟರ್ ಕೆಲಸಕ್ಕೆ ಬರುವುದು ಒಳ್ಳೆಯದಲ್ಲ. ಹೆಣ್ಣು ಮಕ್ಕಳು ಊಟದ ವಿಷಯದಲ್ಲಿ ಎಲ್ಲಿಬೇಕು ಅಲ್ಲಿ ನಿಂತು ಊಟ ಮಾಡಲು ಮುಜುಗರಪಟ್ಟುಕೊಳ್ಳುತ್ತಾರೆ. ಹೀಗೆ ಸರಿಯಾದ ಸಮಯಕ್ಕೆ ಊಟ ಮಾಡದ ಕಾರಣ ಅನಾರೋಗ್ಯಕ್ಕೆ ಈಡಾಗಿದ್ದಾರೆ. ಆದರೆ ಗಂಡುಮಕ್ಕಳು ಹಾಗಲ್ಲ ಎಲ್ಲಿ ಬೇಕಾದರೂ ನಿಂತು ತಿಂದು ಬಿಡುತ್ತಾರೆ. ಪ್ರಯಾಣಿಕರು ಗಂಡುಮಕ್ಕಳಿಗೇ ಬಗ್ಗುವುದಿಲ್ಲ. ಅವರಿಗೆನೇ ಒಂದೊಂದು ಸಾರಿಯಾಗಿ ಚಳ್ಳೆಹಣ್ಣು ತಿನ್ನಿಸುತ್ತಾರೆ. ಅಂತಹದರಲ್ಲಿ ಹೆಣ್ಣುಮಕ್ಕಳಿಗೆ ಬಿಡುತ್ತಾರಾ. ಹೆಣ್ಣುಮಕ್ಕಳಿಗೆ ಸರಿ ಪ್ರಯಾಣಿಕರು ಬಗ್ಗುವುದಿಲ್ಲ. ಅವರ ಮಾತೇ ಕೇಳುವುದಿಲ್ಲ. ತುಂಬಾ ರಶ್ ಇರುವ ಕಡೆ ಡ್ಯೂಟಿಗೆ ಹಾಕಿದಾಗ ಟಾಪ್ ಮೇಲೆ ಪ್ರಯಾಣಿಕರು ಕೂತುಕೊಂಡಾಗ ಅಲ್ಲಿ ಹೋಗಿ ಟಿಕೇಟ್ ತೆಗೆದುಕೊಳ್ಳುವುದಕ್ಕೆ ಕಷ್ಟವಾಗುತ್ತದೆ. ಅಂತ ಸಮಯದಲ್ಲಿ ಚೆಕಿಂಗ್ ಆಫೀಸರ್ ಬಂದರೆ ಕೇಸ್ ಮಾಡಿಬಿಡುತ್ತಾರೆ. ಒಮ್ಮೊಮ್ಮೆ ಕೆಲಸ ಕಳೆದುಕೊಳ್ಳುವ ಸಂದರ್ಭ ಕೂಡಾ ಬರಬಹುದು ಎಂದು ಕಂಟ್ರೋಲರ್‌ಗಳು ಹೇಳುತ್ತಾರೆ.

### ೨. ಡ್ರೈವರ್ ಮತ್ತು ಪುರುಷ ಕಂಡಕ್ಟರ್‌ಗಳ ದೃಷ್ಟಿಯಲ್ಲಿ :

ಡ್ರೈವರುಗಳ ದೃಷ್ಟಿಯಲ್ಲಿ ಮಹಿಳೆಯರು ಇಂತಹ ಕೆಲಸಕ್ಕೆ ಬರುವುದು ಒಳ್ಳೆಯದಲ್ಲ ಎಂಬ ಅಭಿಪ್ರಾಯವಿದೆ. ಇಂತಹ ಕೆಲಸಕ್ಕೆ ಬರುವವರು ಮನೆಯಲ್ಲಿ ಹೇಳುವವರು ಕೇಳುವವರು ಯಾರು ಇಲ್ಲದವರು ಮಾತ್ರ ಈ ಕೆಲಸಕ್ಕೆ ಬರುತ್ತಾರೆ. ಮರ್ಯಾದಸ್ಥ ಕುಟುಂಬದ ಹೆಣ್ಣುಮಕ್ಕಳು ಈ ಉದ್ಯೋಗಕ್ಕೆ ಬರುವುದಿಲ್ಲ. ಮರ್ಯಾದೆ ಇಲ್ಲದ ಕುಟುಂಬದ ಹೆಣ್ಣು ಮಕ್ಕಳೆ ಇಂಥ ಕೆಲಸಕ್ಕೆ ಬರುತ್ತಾರೆ ಎಂದು ಹೇಳುತ್ತಾರೆ. ಇನ್ನು ಕೆಲವರು ಹೆಣ್ಣುಮಕ್ಕಳು ತಂದೆ-ಅಣ್ಣ ಗಂಡ ದುಡಿದು ತಂದಿದ್ದನ್ನು ಮನೆಯಲ್ಲಿ ಮಾಡಿಕೊಂಡು ತಿನ್ನುವುದು ಬಿಟ್ಟು ಈ ಕೆಲಸಕ್ಕೆ ಯಾಕೆ ಬರುತ್ತಾರೆ, ಮದುವೆ ಮಾಡಿಕೊಂಡು ಗಂಡನ ಮನೆಯಲ್ಲಿ ಸುಖವಾಗಿ ಇರುವುದು ಬಿಟ್ಟು ಈ ಕೆಲಸಕ್ಕೆ ಬಂದಿದ್ದಾರೆ. ಹೆಣ್ಣುಮಕ್ಕಳು ಹೇಗಿರಬೇಕು ಹಾಗೇ ಇದ್ದರೇನೆ ಮಾತ್ರ ಚೆಂದ ಅದು ಬಿಟ್ಟು ನಾನು ಏನೋ ದೊಡ್ಡದಾಗಿ ಮಾಡುತ್ತೀವಿ ಅಂತ ಬರುತ್ತಾರೆ ಅಂತ ಹೀಯಾಳಿಸಿ ಮಾತನಾಡುತ್ತಾರೆ. ಇನ್ನೂ ಕೆಲವು ಪುರುಷ ಕಂಡಕ್ಟರ್‌ಗಳು ಹೆಣ್ಣುಮಕ್ಕಳು ಈ ಉದ್ಯೋಗಕ್ಕೆ ಬರುವುದರಿಂದ ನಮಗೆ ಉದ್ಯೋಗ ಸಿಗುತ್ತಿಲ್ಲ ಎಂದು ಹೇಳಿದರು. ಇನ್ನು ಕೆಲವರು ಹೆಣ್ಣುಮಕ್ಕಳು ಕಂಡಕ್ಟರ್ ಕೆಲಸ ಮಾಡುವುದರಲ್ಲಿ ಯಾವುದೇ ತಪ್ಪಿಲ್ಲ ಎಂದಿದ್ದಾರೆ. ಅವರು ಯಾವುದರಲ್ಲಿನು ಕಡಿಮೆ ಇಲ್ಲ. ಎಲ್ಲಾರು ಚೆನ್ನಾಗಿ ಮಾಡಿಕೊಂಡು ಹೋಗುತ್ತಾರೆ. ಅವರು ಕೆಲಸ ಮಾಡುತ್ತಿರುವುದನ್ನು ನೋಡಿದರೆ ತುಂಬಾ ಸಂತೋಷವಾಗುತ್ತದೆ ಅಂತ ಹೇಳಿದವರು. ಇನ್ನು ಕೆಲವು ಸಹೋದ್ಯೋಗಿಗಳು ಹೆಣ್ಣುಮಕ್ಕಳಿಗೆ ಶಿಕ್ಷಕಿಯಂತಹ ಕೆಲಸಗಳನ್ನು ಮಾತ್ರ ಮಾಡಬೇಕು. ಏಕೆಂದರೆ

ಮನೆಯೇ ಮೊದಲ ಪಾಠ ಶಾಲೆ ತಾಯಿಯೇ ಮೊದಲ ಗುರುವಾಗಿರುವುದರಿಂದ ಹೆಣ್ಣುಮಕ್ಕಳಿಗೆ ಇಂತಹ ಕೆಲಸಗಳನ್ನು ಮಾಡುವುದು ಮಾತ್ರ.ಸೂಕ್ತ ೧೦ ಗಂಟೆ ಹೋಗಿ ೫ ಗಂಟೆ ಬರುವ ಕೆಲಸ ಇವರಿಗೆ ಸೂಕ್ತವಾದುದು. ಇದು ಬೆಳಿಗ್ಗೆ ೫-೬ ಗಂಟೆಗೆ ಹೋದರೆ ರಾತ್ರಿ ಬರುವುದು ಎಷ್ಟೊತ್ತಾಗುತ್ತದೆ ಹೇಳುವುದಕ್ಕೆ ಆಗುವುದಿಲ್ಲ.

## ೩. ಮ್ಯಾನೇಜರ್ :

ಕಂಡಕ್ಟರ್ ಕೆಲಸಕ್ಕೆ ಬಂದಾಗ ನಾವು ಹೆಣ್ಣು-ಗಂಡು ಎನ್ನುವ ದೃಷ್ಟಿಯಿಂದ ನೋಡುವುದಿಲ್ಲ. ನಾವು ಇಬ್ಬರನ್ನು ಒಂದೇ ದೃಷ್ಟಿಕೋನದಿಂದ ನೋಡುತ್ತೇವೆ. ಕೆಲಸ ಮಾತ್ರ ಇಬ್ಬರಿಗೂ ಒಂದೇ ರೀತಿಯಾಗಿರುತ್ತದೆ. ಒಂದೇ ರೀತಿ ಸಂಬಳ ಇರುತ್ತದೆ. ಆದರೆ ಪುರುಷ ಕಂಡಕ್ಟರ್‌ಗಳಿಗೆ ನೈಟ್‌ಹಾಲ್ಟ್ ಇರುತ್ತದೆ. ಮಹಿಳೆಯರಿಗೆ ನೈಟ್‌ಹಾಲ್ಟ್ ಕೊಡುವುದಿಲ್ಲ. ಏಕೆಂದರೆ ಅವರಿಗೆ ಉಳಿದುಕೊಳ್ಳುವುದಕ್ಕೆ ಸೌಲಭ್ಯಗಳಿಲ್ಲ. ಬಸ್‌ನಲ್ಲಿ ಮಲಗಬೇಕಾಗುತ್ತದೆ. ಸುಮ್ಮೆ ಇಲ್ಲದೆಲ್ಲ ತೊಂದರೆ. ಅದಕ್ಕೆ ನಾವು ಮಹಿಳೆಯರನ್ನು ರಾತ್ರಿಪಾಳಿ ಕೆಲಸಕ್ಕೆ ಕಳುಹಿಸುವುದಿಲ್ಲ. ಮಹಿಳಾ ಕಂಡಕ್ಟರ್‌ಗಳು ಹೆಚ್ಚಿನ ಕಲೆಕ್ಷನ್ ತರುತ್ತಾರೆ ಎಂದು ಹೇಳಿದರು.

## ೪. ಟ್ರಾಫಿಕ್ ಇನ್ಸ್‌ಪೆಕ್ಟರ್ :

ಕಂಡಕ್ಟರ್ ಕೆಲಸ ಹೆಣ್ಣುಮಕ್ಕಳಿಗೆ ಸೂಟೆಬಲ್ ಅಲ್ಲ. ಹೆಣ್ಣುಮಕ್ಕಳು ಈ ಕೆಲಸಕ್ಕೆ ಬರಬಾರದು. ಪ್ರಯಾಣಿಕರು ಮಹಿಳಾ ಕಂಡಕ್ಟರ್‌ಗಳ ಮಾತು ಕೇಳುವುದಿಲ್ಲ. ಅವರನ್ನು ತುಂಬಾ ಸತಾಯಿಸುತ್ತಾರೆ. ಹೆಣ್ಣುಮಕ್ಕಳು ತುಂಬಾ ಸೂಕ್ಷ್ಮವಾಗಿರುವುದರಿಂದ ಇಂತ ಕಷ್ಟದ ಕೆಲಸ ಮಾಡುವುದಕ್ಕೆ ಅವರಿಗೆ ಕಷ್ಟ. ಮಹಿಳಾ ಕಂಡಕ್ಟರ್‌ಗಳು ಪುರುಷ ಕಂಡಕ್ಟರ್‌ಗಳಿಗಿಂತ ತುಂಬಾ ನಿಷ್ಠೆಯಿಂದ ಕೆಲಸ ಮಾಡುತ್ತಾರೆ ಎಂಬುದಾಗಿ ಪರಸ್ಪರ ವೈರುಧ್ಯಾತಮ್ಕ ಹೇಳಿಕೆಗಳನ್ನು ನೀಡಿದ್ದಾರೆ. ತಿಂಗಳ ಮುಟ್ಟಿನ ಸಂದರ್ಭದಲ್ಲಿ ಹೆಣ್ಣುಮಕ್ಕಳಿಗೆ ಕೆಲಸ ಮಾಡುವುದಕ್ಕೆ ಕಷ್ಟವಾಗುತ್ತೆ. ಏಕೆಂದರೆ ನಿಂತುಕೊಂಡೆ ಕೆಲಸ ಮಾಡುವುದರಿಂದ ಅವರು ತುಂಬಾ ಸುಸ್ತಾಗುತ್ತಾರೆ. ಗರ್ಭಿಣಿಯಾದಾಗ ನಿರಂತರವಾಗಿ ನಿಂತುಕೊಂಡೆ ಕೆಲಸ ಮಾಡುವುದರಿಂದ ಗರ್ಭಪಾತದಂತಹ ಸಮಸ್ಯೆಗಳು ಎದುರಿಸುತ್ತಿದ್ದಾರೆ. ಅದಕ್ಕೆ ಮಹಿಳೆಯರು ಇಂತಹ ಕೆಲಸಗಳನ್ನು ಮಾಡಬಾರದು ಎಂದು ಹೇಳುತ್ತಾರೆ. ಹೆಣ್ಣುಮಕ್ಕಳು ಇಂತಹ ಕೆಲಸಗಳಿಗೆ ಬಂದರೆ ಅದು ಅವರ ಭವಿಷ್ಯಕ್ಕೆ ತೊಂದರೆ. ಅವರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಪುರುಷರು ಮುಂದೆ ಬರುವುದಿಲ್ಲ. ಏಕೆಂದರೆ ಪುರುಷ ಸಹೋದ್ಯೋಗಿಗಳ ಜೊತೆನೇ ಕೆಲಸ ಮಾಡಬೇಕು. ಆದರೆ ನಮ್ಮ ಸಮಾಜ ವ್ಯವಸ್ಥೆಯಲ್ಲಿ ಅನ್ಯ ಪುರುಷರ ಜೊತೆ ಇರುವುದನ್ನು ಇಷ್ಟಪಡುವುದಿಲ್ಲ. ಇಲ್ಲಸಲ್ಲದ ಅನುಮಾನವನ್ನು ಹುಟ್ಟಿಹಾಕುತ್ತದೆ. ಅವರು ಎಷ್ಟೇ ಸರಿಯಾಗಿದ್ದರೂ ಅವರನ್ನು ಕೀಳು ದೃಷ್ಟಿಯಿಂದಲೇ ಕಾಣುತ್ತಾರೆ ಎಂದು ಹೇಳಲಾಗಿದೆ.

### ೫. ಪ್ರಯಾಣಿಕರ ದೃಷ್ಟಿಯಲ್ಲಿ :

ಸಾರ್ವಜನಿಕ ವಲಯವಾದ ಸಾರಿಗೆ ಸಂಸ್ಥೆಯಲ್ಲಿ ಪ್ರಯಾಣಿಕರ ಸಹಾಕರ ಇಲ್ಲದಿದ್ದರೆ ಕೆಲಸ ಮಾಡುವುದಕ್ಕೆ ಕಷ್ಟವಾಗುತ್ತದೆ. ಆದರೂ ಕೆಲವು ಪ್ರಯಾಣಿಕರು ಸಹಕಾರ ನೀಡುತ್ತಾರೆ. ಇನ್ನೂ ಕೆಲವರು ನೀಡುವುದಿಲ್ಲ. "ಹೆಣ್ಣುಮಕ್ಕಳು ಇಂತಹ ಕೆಲಸಕ್ಕೆ ಬರಬಾರದು" ಟೀಚರ್‌ಗಳಂತಹ ಕೆಲಸ ಮಾಡಿದರೇನೆ ಚೆಂದ. ಏಕೆಂದರೆ ಬಸ್‌ನಲ್ಲಿ ಎಂಥೆಂದ ಜನ ಬರುತ್ತಾರೋ ಗೊತ್ತಿಲ್ಲ. ಅವರೆಲ್ಲರಿಗೂ ಹೊಂದಿಕೊಂಡು ಹೋಗಬೇಕು. ಕೆಲವು ಜನ ಬೇಕೂ ಅಂತನೇ ಗಲಾಟೆ ಮಾಡುವುದು ಚುಡಾಯಿಸುವುದು ಮಾಡುತ್ತಾರೆ. ಇದನೆಲ್ಲ ಅವರಿಗೆ ಸಹಿಸಿಕೊಳ್ಳುವುದಕ್ಕೆ ಆಗುವುದಿಲ್ಲ. ಅವರು ತುಂಬಾ ಸೂಕ್ಷ್ಮಮನಸ್ಸಿನವರು ಅದಕ್ಕೆ ಹೆಣ್ಣುಮಕ್ಕಳು ಈ ಕೆಲಸಕ್ಕೆ ಬರಬಾರದು ಎಂದು ಕೆಲವು ಪ್ರಯಾಣಿಕರು ಹೇಳಿದರು.

ಇನ್ನೂ ಕೆಲವು ಪ್ರಯಾಣಿಕರು ಲೇಡಿ ಕಂಡಕ್ಟರ್‌ಗಳಿಗಿಂತ ಪುರುಷ ಕಂಡಕ್ಟರ್‌ಗಳೇ ತುಂಬಾ ಒಳ್ಳೆಯವರು. ಏಕೆಂದರೆ ಲೇಡಿ ಕಂಡಕ್ಟರ್‌ಗಳು ತುಂಬಾ ಸಿಟ್ಟು ಸಿಟ್ಟು ಮಾಡುತ್ತಾರೆ. ಅವರಿಗೆ ತಾಳ್ಮೇನೆ ಇಲ್ಲ. ಅವರು ತುಂಬಾ ಒರಟಾಗಿ ಮಾತನಾಡುತ್ತಾರೆ. ಸ್ವಲ್ಪನೂ ಮರ್ಯಾದೇನೆ ಕೊಡುವುದಿಲ್ಲ ಎಂದು ಹೇಳಿದರು.

ಇನ್ನೂ ಕೆಲವರು ಪ್ರಯಾಣಿಕರು ಹೆಣ್ಣುಮಕ್ಕಳು ಇಂತಹ ಕೆಲಸಗಳನ್ನು ಮಾಡಿದರೆ ಅವರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಯಾರು ಮುಂದೆ ಬರುವುದಿಲ್ಲ. ಏಕೆಂದರೆ ಈ ಉದ್ಯೋಗ ಸಾರ್ವಜನಿಕ ವಲಯವಾದ್ದರಿಂದ ಹೆಚ್ಚಾಗಿ ಜನರ ಜೊತೆಗೆ ಬೆರೆಯಬೇಕಾಗುತ್ತದೆ. ಆದರೆ ನಮ್ಮ ಸಂಪ್ರಾದಾಯಸ್ಥ ಸಮಾಜ ಹೆಣ್ಣುಮಕ್ಕಳು ಈ ರೀತಿಯಾಗಿರುವುದನ್ನು ಒಪ್ಪಿಕೊಳ್ಳುವುದು ಕಷ್ಟ. ನಮ್ಮ ಸಂಪ್ರದಾಯದ ಪ್ರಕಾರ ಹೆಣ್ಣುಮಕ್ಕಳು ಮನೆಯಲ್ಲಿ ಇರುವುದನ್ನು ಮಾತ್ರ ಒಪ್ಪಿಕೊಳ್ಳುತ್ತದೆ ಎಂದು ಕೆಲವು ಪ್ರಯಾಣಿಕರು ಹೇಳಿದರು.

ಇನ್ನೂ ಕೆಲವು ಪ್ರಯಾಣಿಕರು ಹೆಣ್ಣುಮಕ್ಕಳು ಇತ್ತೀಚಿನ ದಿನಗಳಲ್ಲಿ ಪೆಟ್ರೋಲ್‌ಬಂಕ್, ಪೋಲಿಸ್ ಇತ್ತಾದಿ ಎಲ್ಲಾ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಹೆಣ್ಣುಮಕ್ಕಳು ಗಂಡು ಮಕ್ಕಳಿಗಿಂತ ಯಾವುದರಲ್ಲಿಯೂ ಕಡಿಮೆ ಇಲ್ಲ. ಹೆಣ್ಣುಮಕ್ಕಳು ತುಂಬಾ ಲವಲವಿಕೆಯಿಂದ ಕೆಲಸ ಮಾಡುತ್ತಾರೆ. ಅವರನ್ನು ನೋಡಿ ನಮಗೆ ತುಂಬಾ ಸಂತೋಷವಾಗುತ್ತದೆ ಎಂದು ಹೇಳಿದರು. ಇನ್ನೂ ಕೆಲವರು ಎಷ್ಟು ಸಂಬಳ ಕೊಟ್ಟರೂ ಈ ಕೆಲಸಕ್ಕೆ ಹೆಣ್ಣುಮಕ್ಕಳು ಬರಬಾರದು ಎಂದು ಹೇಳಿದರು.

### ೩.೨ ಕೌಟುಂಬಿಕ ಸಮಸ್ಯೆ :

ಕುಟಂಬ ಸಮಾಜದ ಆಧಾರಸ್ಥಂಭವಾಗಿದ್ದು, ಇದು ಆಯಾ ಕಾಲದಲ್ಲಿ ಸಮಾಜದ ಮೌಲ್ಯಗಳನ್ನು ನಂಬಿಕೆಗಳನ್ನು ಆಚರಣೆಗಳನ್ನು ತನ್ನ ಸದಸ್ಯರಿಗೆ ಪರಿಚಯಿಸುವಂತಹ ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಕುಟುಂಬದಲ್ಲಿ ಸ್ತ್ರೀ-ಪುರುಷರಿಗೆ ನಿರ್ದಿಷ್ಟ ಪಾತ್ರಗಳನ್ನು ಹಂಚಲಾಗುತ್ತದೆ. ಮಕ್ಕಳ ಲಾಲನೆ-ಪಾಲನೆ

ಅಡುಗೆ ಮಾಡುವುದು, ಉಣಬಡಿಸುವುದು, ಗೃಹಕೃತ್ಯಗಳನ್ನು ಸಂಬಾಳಿಸುವುದು ಇವೆಲ್ಲಾ ಮಹಿಳೆಯರ ಪಾಲಿನ ಕೆಲಸಗಳಾಗಿವೆ. ಮಹಿಳೆಯರು ಹೊರಗಡೆ ೧೪-೧೫ ತಾಸುಗಳ ಕೆಲಸ ಮಾಡಿಬಂದರು ಮನೆಕೆಲಸ ಮತ್ತು ಅಡಿಗೆ ಕೆಲಸಗಳಿಂದ ಅವರಿಗೆ ಮುಕ್ತಿ ಇಲ್ಲ. ನಿರಂತರವಾಗಿ ಕೆಲಸದಲ್ಲಿಯೇ ನಿರಂತರವಾಗಿರುವುದರಿಂದ ನಾವು ದೈಹಿಕವಾಗಿ, ಮಾನಸಿಕವಾಗಿ ಕುಗ್ಗಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳ ಗಂಡಂದಿರು ಕೆಲಸದಿಂದ ಬೇಗ ಬಂದರೂ ಮನೆಯಲ್ಲಿಯೇ ಇದ್ದರೂ ಮನೆಕೆಲಸದಲ್ಲಿ ಸಹಾಯ ಮಾಡುವುದಿಲ್ಲ. ಮಕ್ಕಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊತ್ತಿರುವುದು ಬಹಳ ಕಡಿಮೆ ಎಂದು ಹೇಳಿದರು.

ಮಹಿಳಾ ಕಂಡಕ್ಟರ್‌ಗಳಿಗೆ ಕುಟುಂಬದಲ್ಲಿ ತಲೆದೋರಿರುವ ಹಲವಾರು ಸಮಸ್ಯೆಗಳು ಇವರು ಕೆಲಸಕ್ಕೆ ಹೋಗುವುದರಿಂದಲೇ ಉಂಟಾಗುತ್ತಿವೆ ಎಂದು ಹೇಳಲಾಗಿದೆ. ಮಕ್ಕಳು, ಗಂಡ ಹಾಗೂ ಕುಟುಂಬದ ಇತರ ಸದಸ್ಯರ ಮೇಲೆ ಅಗಾಧ ಪರಿಣಾಮ ಉಂಟಾಗಿದೆ ಎಂದು ದೂರುತ್ತಿದ್ದಾರೆ. ವಿಭಕ್ತ ಕುಟುಂಬವಾಗಿರುವುದರಿಂದ ಮನೆಯಲ್ಲಿ ಅತ್ತೆ, ಮಾವ, ನಾದಿನಿಯರು ಇಲ್ಲ ನಮ್ಮ ಗಂಡಂದಿರು ಮಾತ್ರ ಇರುತ್ತಾರೆ. ಮನೆಯಲ್ಲಿಯೇ ಇದ್ದರೂ ನಾವು ಕೆಲಸಕ್ಕೆ ಹೋದಾಗ ಮನೆಯಲ್ಲಿ ಯಾರೂ ಇರುವುದಿಲ್ಲ. ಬೆಳಿಗ್ಗೆ ಮಕ್ಕಳನ್ನು ಶಾಲೆಗೆ ರೆಡಿ ಮಾಡಿ ಕೆಲಸಕ್ಕೆ ಹೋದರೆ ಮನೆಗೆ ಬರುವುದು ರಾತ್ರಿ ೯-೧೦ ಗಂಟೆಯಾಗಿರುತ್ತದೆ. ಮಕ್ಕಳು ಶಾಲೆಗೆ ಸರಿಯಾಗಿ ಹೋಗದೆ ಇರುವುದರಿಂದ ಮಕ್ಕಳ ಶಿಕ್ಷಣಕ್ಕೆ ತೊಂದರೆಯಾಗುತ್ತದೆ. ಆದ್ದರಿಂದ ಮಕ್ಕಳನ್ನು ನಮ್ಮ ತಂದೆ-ತಾಯಿ ಮನೆಯಲ್ಲಿ ಅತ್ತೆ-ಮಾವಂದಿರ ಮನೆಯಲ್ಲಿ ಬಿಟ್ಟು ಬಂದಿದ್ದೇವೆ. ಮಕ್ಕಳಿಗೆ ಪ್ರೀತಿ, ವಾತ್ಸಲ್ಯವನ್ನು ಒದಗಿಸಲು ಸಾಧ್ಯವಾಗುತ್ತಿಲ್ಲ ಎಂಬ ಅಪಾರಾಧಿ ಪ್ರಜ್ಞೆ ಕಾಡುತ್ತಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ವಿವಾಹಿತ ಮಹಿಳಾ ಕಂಡಕ್ಟರ್‌ಗಳು ಆಕೆ ತಾಯಿ, ದುಡಿಯುವ ಸ್ತ್ರೀ ಈ ಎಲ್ಲಾ ಪಾತ್ರಗಳನ್ನು ಸಮಂಜಸವಾಗಿ ನಡೆಸಲು ಸಾಧ್ಯವಾಗುತ್ತಿಲ್ಲವೆಂದು ಮನೆತನ ಅಲಕ್ಷಗೊಳ್ಳುತ್ತಿವೆ ಎಂಬ ಅಪರಾಧಿ ಪ್ರಜ್ಞೆಯನ್ನು ವ್ಯಕ್ತಪಡಿಸಿದ್ದಾರೆ. ಆದ್ದರಿಂದ ನೆಮ್ಮದಿಯಾಗಿ ಕೆಲಸನ್ನು ಮಾಡಲಾಗುತ್ತಿಲ್ಲ ಎಂದು ಹೇಳಿಕೊಂಡರು.

## ಆ. ಆರ್ಥಿಕ ಅಭದ್ರತೆ :

ಪುರಾತನ ಕಾಲದಲ್ಲಿ ಮೊದಲು ಮಾತೃಪ್ರಧಾನ ಕುಟುಂಬ ಪದ್ಧತಿ ನಮ್ಮೊಳಗೆ ಇತ್ತು. ತದನಂತರ ಪುರುಷ ಪ್ರಧಾನ ಸಮಾಜ ರಾರಾಜಿಸುತ್ತಿದೆ. ಸ್ವಾರ್ಥ ಪುರುಷ ಸಮಾಜ ನಿರ್ಮಾಣವಾಗಿದೆ. ಇಂದು ಮಹಿಳೆ ಪುರುಷರ ಸಮನಾಗಿ ದುಡಿಯುತ್ತಿದ್ದರೂ ಆರ್ಥಿಕವಾಗಿ ಸಬಲಳಾಗಿದ್ದರೂ ಕುಟುಂಬದಲ್ಲಿ ಅವಳು ಪುರುಷರ ಹಿಡಿತದಲ್ಲಿಯೇ ಇರಬೇಕಾಗಿದೆ.

ಕುಟುಂಬಕ್ಕೆ ಮಹಿಳಾ ಕಂಡಕ್ಟರ್‌ಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಆಧಾರಸ್ತಂಭಗಿದ್ದರೂ ಅಭಿವೃದ್ಧಿಯ ಪಥದಲ್ಲಿ ಮುನ್ನಡೆಯುತ್ತಿದ್ದರೂ ಗಂಡ-ತಂದೆಯ ಅಧೀನದಲ್ಲಿಯೇ ಬಾಳುತ್ತಿದ್ದಾರೆ.

ಕುಟುಂಬದ ಅಂತಿಮ ನಿರ್ಧಾರ ಗಂಡ ಮತ್ತು ತಂದೆಯರದೆ ಇಂತಹ ವ್ಯವಸ್ಥೆಯನ್ನು ಕೆಲವು ಮಹಿಳಾ ಕಂಡಕ್ಟರ್‌ಗಳು ಅಸಹಾಯಕತೆಯಿಂದ ಒಪ್ಪಿಕೊಂಡಿದ್ದೇವೆ ಎಂದು ಹೇಳುತ್ತಾ, ಈ ವ್ಯವಸ್ಥೆಯು ನಮ್ಮ ಸ್ವಾಭಿಮಾನಕ್ಕೆ, ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿದೆ ಎಂದಿದ್ದಾರೆ. ಕುಟುಂಬದ ಇತರ ಸದಸ್ಯರ ಹೊಣೆಗಾರಿಕೆ ಹೊತ್ತಾ ಸಾಗಿದರೂ ಸಹ ಅವರಿಗೆ ಯಾವುದೇ ಭದ್ರತೆ ಇಲ್ಲದೆ ಇರುವುದರಿಂದ ಕೆಲವು ಮಹಿಳಾ ಕಂಡಕ್ಟರ್‌ಗಳು ಮಾನಸಿಕ ತುಮುಲಗಳಿಗೆ ಒಳಗಾಗಿದ್ದಾರೆ.

ಕೆಲವು ಅವಿವಾಹಿತ ಮಹಿಳಾ ಕಂಡಕ್ಟರ್‌ಗಳಿರುವ ಕುಟುಂಬದಲ್ಲಿ ಮಗಳ ಆದಾಯವನ್ನು ಉಪಯೋಗಿಸಿಕೊಳ್ಳುವುದು ನಾಚಿಕೆಗೇಡು ಎಂದು ಭಾವಿಸಿದ್ದಾರೆ. ಭಾರತೀಯ ಸಮಾಜದಲ್ಲಿ ಮಗನ ಸಂಪಾದನೆಯನ್ನು ಕುಟುಂಬ ಆಧರಿಸಿರುವುದನ್ನು ಹೆಮ್ಮೆಯ ವಿಷಯವೆಂದೂ ಮಗಳ ಸಂಪಾದನೆಯಿಂದ ಕುಟುಂಬ ನಡೆಸುವುದು ಅಪಮಾನಕರವೆಂದೂ ಭಾವಿಸಲಾಗುತ್ತಿದೆ. ಆದಾಗ್ಯೂ ಕೆಲವು ಅವಿವಾಹಿತ ಮಹಿಳಾ ಕಂಡಕ್ಟರ್‌ಗಳು ಮನೆಯ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ದೃಷ್ಟಿಯಿಂದ ತಂದೆ-ತಾಯಿಯರ ಸಂರಕ್ಷಣೆಯಲ್ಲಿ ತಮ್ಮ ತಂಗಿಯರ ಜೀವನಕ್ಕಾಗಿ ಅವಿವಾಹಿತರಾಗಿ ಉಳಿದುಕೊಂಡಿದ್ದೇವೆ ಎಂದು ಕೂಡಾ ಹೇಳಿದ್ದಾರೆ.

### ಆ. ಗಂಡಂದಿರ ಆರ್ಥಿಕ ಸ್ಥಿತಿ :

ಮಹಿಳಾ ಕಂಡಕ್ಟರ್‌ಗಳ ಕೌಟುಂಬಿಕ ಸಮಸ್ಯೆಯನ್ನು ತಿಳಿಯುವಲ್ಲಿ ಅವರ ಗಂಡಂದಿರ ವೃತ್ತಿಯು ಸಂಶೋಧನೆಯ ದೃಷ್ಟಿಯಿಂದ ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಕೆಲವು ಮಹಿಳಾ ಕಂಡಕ್ಟರ್ ಇವರಿಗಿಂತ ಕೆಳಸ್ತರದಲ್ಲಿ ಟೈಲರಿಂಗ್, ಆಟೋ ಡ್ರೈವರ್, ವ್ಯವಸಾಯ, ನಿರುದ್ಯೋಗ ಮೊದಲಾದೆಡೆಗಳಲ್ಲಿ ಇರುವವರಾಗಿದ್ದಾರೆ. ಇಲ್ಲಿ ಮಹಿಳಾ ಕಂಡಕ್ಟರ್‌ಗಳ ಗಂಡಂದಿರರು ಲಾಭದಾಯಕ ವೃತ್ತಿಯಲ್ಲಿ ಮತ್ತು ಸರ್ಕಾರಿ ಹುದ್ದೆಯಲ್ಲಿ ಇಲ್ಲದಿರುವುದು ಕಂಡುಬಂದಿದೆ. ಇವರ ಗಂಡಂದಿರು ಸರ್ಕಾರಿ ನೌಕರಿಯಲ್ಲಿ ಇದಿದ್ದರೆ ತಮ್ಮ ಹೆಂಡತಿಯನ್ನು ಈ ಕೆಲಸಕ್ಕೆ ಕಳುಹಿಸುತ್ತಿರಲಿಲ್ಲ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳ ಗಂಡಂದಿರು ಹೇಳಿದರು. ಅದೇ ರೀತಿ ಅವಿವಾಹಿತ ಮಹಿಳಾ ಕಂಡಕ್ಟರ್‌ಗಳ ತಂದೆ-ತಾಯಂದಿರು ವ್ಯವಸಾಯ ಮಾಡುತ್ತಿದ್ದಾರೆ. ಹೊಲದಲ್ಲಿ ಬೆಳೆ ಇಲ್ಲ. ಮನೆ ತುಂಬಾ ಮಕ್ಕಳು ಮನೆ ನಡೆಸಿಕೊಂಡು ಹೋಗುವುದು ಕಷ್ಟ. ಆದ್ದರಿಂದ ನನ್ನ ಮಗಳನ್ನು ಕಂಡಕ್ಟರ್ ಕೆಲಸಕ್ಕೆ ಕಳುಹಿಸಿದ್ದೀವಿ. ನಾವೇನಾದರೂ ಸರ್ಕಾರಿ ಕೆಲಸದಲ್ಲಿ ಇದ್ದಿದರೆ ಅಥವಾ ಲಾಭದಾಯಕ ಕೆಲಸ ಮಾಡುತ್ತಿದ್ದರೆ ನಮ್ಮ ಮಗಳನ್ನು ಈ ಕೆಲಸಕ್ಕೆ ಕಳುಹಿಸುತ್ತಿರಲಿಲ್ಲ. ಹೀಗೆ ಈ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣುಮಕ್ಕಳನ್ನು ತನ್ನ ಸ್ವಾರ್ಥಕ್ಕೆ ಅನುಗುಣವಾಗಿ ಬಳಸಿಕೊಳ್ಳುತ್ತಿದೆ. ಮಹಿಳೆಯರು ಇಂತಹ ಕೆಲಸಕ್ಕೆ ಹೋಗಬೇಕು ಅಂದರೆ ಹೋಗಬೇಕು. ಬೇಡ ಅಂದರೆ ಮನೆಯಲ್ಲಿಯೇ ಇರಬೇಕು. ಇದು ಸಾಮಾಜಿಕ ವಾಸ್ತವ.

### ಇ. ಕುಟುಂಬದ ಸದಸ್ಯರ ಜೊತೆ ಹೊಂದಾಣಿಕೆ ಸಮಸ್ಯೆ :

ಮನುಷ್ಯನಿಗೆ ಭೌತಿಕ ಅವಶ್ಯಕತೆಗಳಿರುವಂತೆ ಮಾನಸಿಕ ಅಗತ್ಯಗಳೂ ಇವೆ. ಇವುಗಳ ಪೂರೈಕೆಯೂ ಭೌತಿಕ ಅಗತ್ಯದಂತೆಯೇ ಮುಖ್ಯವಾಗಿದೆ. ಪ್ರೀತಿ, ವಾತ್ಸಲ್ಯ, ಮಮತೆ, ಕರುಣೆ ಮತ್ತು ಸಹೃದಯತೆಗಾಗಿ

ಮಾನವನ ಮನಸ್ಸು ಯಾವಾಗಲೂ ಹಾತೊರೆಯುತ್ತಿರುತ್ತದೆ. ತಂದೆ-ತಾಯಿಯರ ಪ್ರೇಮ ವಾತ್ಸಲ್ಯಗಳಿಂದ ವಂಚಿತವಾದ ಗಂಡ-ಹೆಂಡತಿಯರ, ಸೋದರ-ಸೋದರಿಯರ, ಮಕ್ಕಳ ಪಾಲಕರ ನಡುವೆ ನಿಕಟ ಸಂಬಂಧವಿದೆ.

ಹೆಚ್ಚಿನ ಮಹಿಳಾ ಕಂಡಕ್ಟರ್‌ಗಳು ಬೇರೆ ಬೇರೆ ಜಿಲ್ಲೆಗಳಿಂದ ಬಂದವರಾಗಿದ್ದಾರೆ. ವಾರದಲ್ಲಿ ಒಂದು ದಿನ ರಜೆ ಕೊಡುತ್ತಾರೆ. ಆ ಒಂದು ದಿನದಲ್ಲಿ ಊರಿಗೆ ಹೋಗುವುದಕ್ಕೆ ಆಗುವುದಿಲ್ಲ. ವಾರ ವಾರ ರಜೆ ತೆಗೆದುಕೊಳ್ಳದೆ ತಿಂಗಳಲ್ಲಿ ೪ ದಿನ ರಜೆ ಹಾಕಿ ಊರಿಗೆ ಹೋಗಬೇಕೆಂದರೆ ಅದಕ್ಕೂ ಅವಕಾಶ ಕೊಡುವುದಿಲ್ಲ. ನೀವು ೩-೪ ದಿನಗಳ ಗಟ್ಟಲೇ ಊರಿಗೆ ಹೋದರೆ ಇಲ್ಲಿ ಕೆಲಸ ಮಾಡುವವರು ಯಾರು? ಮೊದಲೇ ಕಂಡಕ್ಟರ್‌ಗಳ ಸಂಖ್ಯೆ ಕಡಿಮೆಯಿದೆ. ನೀವು ಈ ರೀತಿ ಊರಿಗೆ ಹೋದರೆ ಸಂಸ್ಥೆಗೆ ನಷ್ಟವಾಗುತ್ತೆ ಅಂತ ರಜಾ ಸಹಾ ಕೊಡುವುದಿಲ್ಲ. ಎರಡು ತಿಂಗಳಿಗೊಮ್ಮೆ ಮೂರು ತಿಂಗಳಿಗೊಮ್ಮೆ, ಮನೆಗೆ ಹೋದರೆ ಕುಟುಂಬದ ಸದಸ್ಯರ ಜೊತೆ ಹೊಂದಾಣಿಕೆ ಮಾಡಿಕೊಳ್ಳುವುದು ಕಷ್ಟವಾಗುತ್ತದೆ. ನಾವೆಲ್ಲ ಅವರ ಪ್ರೀತಿ, ವಾತ್ಸಲ್ಯದಿಂದ ವಂಚಿತರಾಗುತ್ತಿದ್ದೇವೆ ಎಂಬ ಅಪರಾಧಿ ಪ್ರಜ್ಞೆ ಕಾಡುತ್ತಿದೆ, ಎಂದು ಹೇಳುವ ತಮ್ಮ ಮನಸ್ಸಿನ ನೋವನ್ನು ಕೆಲವು ಮಹಿಳಾ ಕಂಡಕ್ಟರ್‌ಗಳು ಮುಕ್ತವಾಗಿ ಹೇಳಿಕೊಂಡರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಈ ಕೆಲಸದ ಒತ್ತಡದಲ್ಲಿ ಮತ್ತು ಕೆಲಸದ ಸಮಯ ದೀರ್ಘವಾಗಿರುವುದರಿಂದ ದಿನದಲ್ಲಿ ಹೆಚ್ಚಿನ ಸಮಯ ಕೆಲಸದಲ್ಲಿ ನಿರತರಾಗಿರುವುದರಿಂದ ಮನೆಯವರ ಹತ್ತಿರ ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರ ಜೊತೆ ಕುಳಿತು ಕಷ್ಟ-ಸುಖ ಹೇಳಿಕೊಳ್ಳುವುದಕ್ಕೆ ಆಗುವುದಿಲ್ಲ. ಬೆಳಿಗ್ಗೆ ಕೆಲಸಕ್ಕೆ ಹೋಗುವಾಗ ಮನೆಯಲ್ಲಿ ಎಲ್ಲರು ಮಲಗಿರುತ್ತಾರೆ. ರಾತ್ರಿ ಅವರೆಲ್ಲ ಮಲಗಿರುವ ಸಮಯದಲ್ಲಿ ಮನೆಗೆ ಬರುತ್ತೇವೆ. ಇನ್ನೂ ಯಾವಾಗ ಅವರ ಹತ್ತಿರ ಮಾತನಾಡುವುದು. ಕೆಲಸದ ಸ್ಥಳದಲ್ಲಿ ನಡೆದಂತಹ ನೋವಿನ ಸಂಗತಿಗಳನ್ನು ಹೇಳಿಕೊಂಡು ಮನಸ್ಸು ಹಗುರ ಮಾಡಿಕೊಳ್ಳಬೇಕು ಎಂದರೆ ಕೇಳುವವರು ಯಾರು ಇರುವುದಿಲ್ಲ. ಇಂತಹ ಸಂಗತಿಗಳನ್ನು ಮನಸ್ಸಿನಲ್ಲಿಯೇ ಇಟ್ಟುಕೊಳ್ಳುವುದರಿಂದ ಮಾನಸಿಕವಾಗಿ ಖಿನ್ನತೆಗೆ ಒಳಗಾಗಿದ್ದೇವೆ ಎಂದು ತಮ್ಮ ಮನಸ್ಸಿನ ನೋವುಗಳನ್ನು ಸಂದರ್ಶನದ ಸಮಯದಲ್ಲಿ ಹಂಚಿಕೊಂಡರು.

### ೩.೩ ವೈವಾಹಿಕ ಸಮಸ್ಯೆಗಳು :

ಭಾರತೀಯ ಸಮಾಜದಲ್ಲಿ ಮಹಿಳೆಗೆ ವಿವಾಹವು ಒಂದು ಬಿಡಿಸಲಾರದ ಬಂಧನವಾಗಿದೆ. ಮಹಿಳೆಯರು ವಿವಾಹವಿಲ್ಲದೇ ತಮ್ಮ ಜೀವನದಲ್ಲಿ ಯಾವುದೇ ಬದಲಾವಣೆ ಕಾಣಲು ಸಾಧ್ಯವಿಲ್ಲವೆಂದು ವಿವಾಹದ ನಂತರ ಕೆಲವು ಜವಾಬ್ದಾರಿಯುತವಾದ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು ಅವರ ಕರ್ತವ್ಯವಾಗಿದೆ ಎಂದು ಈ ಸಮಾಜ ಹೇಳುತ್ತದೆ. ಅವುಗಳಲ್ಲಿ ಮುಖ್ಯವಾಗಿ ಮಕ್ಕಳನ್ನು ಹೆರುವ, ಮಕ್ಕಳನ್ನು ಬೆಳೆಸುವ, ಅತಿಯಾದ ಮನೆಕೆಲಸ ಮಹಿಳೆಯರು ಈ ಬಗೆಯ ಎಲ್ಲಾ ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಈ ಪಾತ್ರ ಹಂಚಿಕೆ ಬಹುತೇಕ ಸಂದರ್ಭಗಳಲ್ಲಿ ಸ್ತ್ರೀ-ಪುರುಷರ ನಡುವೆ

ಈಗಾಗಲೇ ಇರುವಂತಹ ಅಸಮಾನತೆಯನ್ನು ಮತ್ತಷ್ಟು ಬಲಗೊಳಿಸುವುದರ ಜೊತೆಗೆ ಸ್ತ್ರೀಯರಿಂದಲೇ ವಿಶೇಷವಾದಂಥ ನಡವಳಿಕೆಯನ್ನು ನಿರೀಕ್ಷಿಸುತ್ತವೆ. ಅಂದರೆ ವಿವಾಹವಾದ ಮಹಿಳೆ ಮತ್ತು ವಿವಾಹವಾಗುತ್ತಿರುವ ಹುಡುಗಿಯರನ್ನು ಈ ಚೌಕಟ್ಟಿನಿಂದ ಹೊರಬಂದು ತನ್ನ ಸಾಮರ್ಥ್ಯ ತೋರಿಸಲು ಬಿಡುವುದಿಲ್ಲ.

ಕಂಡಕ್ಟರ್ ವೃತ್ತಿಯಲ್ಲಿರುವ ಮಹಿಳೆಯರಿಗೆ ಮದುವೆ ಬಹು ಕಷ್ಟಸಾಧ್ಯವಾಗಿದೆ. ಕಂಡಕ್ಟರ್‌ಗಳನ್ನು ಬಹಳ ಜನ ವಿವಾಹವಾಗಲು ಇಷ್ಟಪಡುವುದಿಲ್ಲ. ಏಕೆಂದರೆ ಉತ್ತಮ ಅಥವಾ ಮಧ್ಯಮ ವರ್ಗದ ಉದ್ಯೋಗಸ್ಥನು ಕಂಡಕ್ಟರ್‌ನನ್ನು ವಿವಾಹ ಮಾಡಿಕೊಂಡರೆ ತನ್ನ ಸಹೋದ್ಯೋಗಿಗಳಲ್ಲಿ ತನ್ನ ಸ್ಥಾನಮಾನವೇನು ಎಂದು ತಲೆಕೊಡವುತ್ತಾನೆ. ಹಿರಿಯರ ದೃಷ್ಟಿಯಲ್ಲಿ ಕಂಡಕ್ಟರ್ ಆದವಳು ಸೊಸೆಯಾಗಿ ಮರ್ಯಾದೆಯಿಂದ ಮನೆತನ ನಡೆಸಲಿಕ್ಕೆ ಅನರ್ಹಳು ಎಂದು ವಿವಾಹ ಮಾಡಿಕೊಳ್ಳುವುದಕ್ಕೆ ಹಿಂಜರಿಯುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ವಿವಾಹವು ಹೆಣ್ಣಿಗೆ ಅನಿವಾರ್ಯ. ಹುಟ್ಟಿದ ಮನೆಯಲ್ಲಿ ಹೆಣ್ಣು ಮನೆಯೊಳಗಿನ ಸದಸ್ಯೆಯಾಗಿರುವುದಿಲ್ಲ. ಅವಳು ಹುಟ್ಟಿದಾಗಿನಿಂದಲೂ ಪರರ ಸ್ವತ್ತು ಎಂದು ಹೇಳುತ್ತಾ ಬರಲಾಗಿದೆ. ಈ ಅನಿವಾರ್ಯತೆಯು ಸ್ತ್ರೀಗೆ ಅಧೀನತೆಯನ್ನು ಪುರುಷರಿಗೆ ಅಧಿಕಾರವನ್ನು ದೊರಕಿಸಿಕೊಟ್ಟಿದೆ. ಭಾರತೀಯ ಸಮಾಜದಲ್ಲಿಪುರುಷರಿಗೆ ವಿವಾಹ ಆಯ್ಕೆ ವಿಚಾರವಾಗಿದೆ. ಸ್ತ್ರೀಗೆ ಮಾತ್ರ ಆಯ್ಕೆ ಮಾದರಿಗಳೇ ಇಲ್ಲ. ಒಂದು ವೇಳೆ ಕಂಡಕ್ಟರ್ ಉದ್ಯೋಗದಲ್ಲಿದ್ದಾಗ ವಿವಾಹವಾಗಿದ್ದವರು ಆನಂತರ ಈ ಉದ್ಯೋಗವನ್ನು ಬಿಡಲು ಹೇಳುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಅನುಭವವನ್ನು ಹೇಳಿದರು.

ಪುರುಷ ವಿವಾಹಸಂಸ್ಥೆಯಲ್ಲಿದ್ದುಕೊಂಡೇ ಉಳಿದ ಎಲ್ಲಾ ಸಂಸ್ಥೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಬಹುದು. ಆದರೆ ಸ್ತ್ರೀಗೆ ಮಾತ್ರ ಯಾವ ಬಗೆಯ ಸಮಾನಾಂತರ ಆಯ್ಕೆಗಳು ಸಮಾಜದಲ್ಲಿ ಇಲ್ಲ. ಅಂತಹದರಲ್ಲಿ ಕಂಡಕ್ಟರ್ ವೃತ್ತಿಯನ್ನು ಮಾಡಲು ಮಹಿಳೆ ಆಸಕ್ತಿ ಇದ್ದರೂ ಅವಳಿಗೆ ಅಪಾರ ಭದ್ರತೆಯನ್ನು, ಸಾಮಾಜಿಕ ಸ್ಥಾನವನ್ನು ಕಾನೂನುಗಳ ಮೂಲಕ ಒದಗಿಸಿಕೊಡಬೇಕಾಗಿದೆ. ಈ ಸಂಸ್ಥೆಗಳಲ್ಲಿ ಮಹಿಳೆ ತನ್ನ ಆಸಕ್ತಿದಾಯಕ ಉದ್ಯೋಗದಲ್ಲಿ ಪಾಲ್ಗೊಳ್ಳಲು ಬಿಡುತ್ತಿಲ್ಲ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

**ಅ. ಲೈಂಗಿಕ ತೃಪ್ತಿ :**

ವಿವಾಹವೆಂದರೆ ಸಮಾಜವು ವಿಧಿವತ್ತಾಗಿ ಅನುಮೋದಿಸಿರುವ ಗಂಡು ಹೆಣ್ಣುಗಳ ಲೈಂಗಿಕ ಸಂಯೋಗ.

"ಶರೀರ ಜಾಯತೆ ನಿತ್ಸಂ ವಾಥಾನ್ನಣಾಂ ಚತುರ್ವಿಧಾ

ಬುಭುಕ್ಷಾಚಪಿಪಾಸಾ ಚ ಸುಷುಪ್ಸಾ ಸುರತಸ್ಪ್ರಹಾ"

ಮಾನವನ ಮೂಲಭೂತ ಅಗತ್ಯಗಳಾದ ಅನ್ನ, ನೀರು, ಗಾಳಿ, ಹೇಗೋ ಲೈಂಗಿಕತೆಯು ಸಹ ಒಂದಾಗಿದೆ. ನನ್ನ ಸಂಶೋಧನಾ ಅಧ್ಯಯನದಲ್ಲಿ ಬರುವ ಕೆಲವು ಕಂಡಕ್ಟರ್ ಗೃಹಿಣಿಯಾಗಿ ಇರುವವರು ಇದ್ದಾರೆ. ಈ ಕಂಡಕ್ಟರ್ ವೃತ್ತಿಯಲ್ಲಿ ದಿನದಲ್ಲಿ ಹೆಚ್ಚಿನ ಸಮಯ ನಿಂತುಕೊಂಡೆ ಕೆಲಸ ಮಾಡುವುದರಿಂದ ಕೆಲಸ ಮುಗಿಸಿ ರಾತ್ರಿ ೯-೧೦ ಗಂಟೆಯಾಗುತ್ತೆ, ಮನೆಗೆ ಬಂದು ಮನೆಕೆಲಸ ಮತ್ತು ಅಡಿಗೆ ಮಾಡಿಟ್ಟು ಮಲಗುವಷ್ಟರಲ್ಲಿ ೧೧-೧೨ ಗಂಟೆಯಾಗಿತ್ತು. ಮತ್ತೆ ಬೆಳಿಗ್ಗೆ ೪.೩೦ಕ್ಕೆ ಎದ್ದು ಮನೆಕೆಲಸ ಮಾಡಿ ಕೆಲಸಕ್ಕೆ ಹೋಗುವ ಆತಂಕದಲ್ಲಿ ಇರುತ್ತೇವೆ. ಈ ರೀತಿ ಯಾವಾಗಲೂ ಟೆನ್‌ಶನ್‌ನಲ್ಲಿ ಇರುವುದರಿಂದ ನಮ್ಮ ಗಂಡಂದಿರಿಗೆ ಲೈಂಗಿಕತೆಯಲ್ಲಿ ತೃಪ್ತಿ ನೀಡದ ಕಾರಣ ನಮ್ಮಿಬ್ಬರ ನಡುವೆ ವೈಮನಸ್ಸು ಉಂಟಾಗಿದೆ. ಈ ಕೆಲಸಕ್ಕೆ ಹೋಗುವುದೇ ಬೇಡ ಎಂದು ದಿನಾಲು ಜಗಳ ಮಾಡುತ್ತಾರೆ. ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಮನದ ಮಾತನ್ನು ಹೀಗೆ ಹೇಳಿಕೊಂಡರು.

### ಆ. ಸಂತಾನೋತ್ಪತ್ತಿ :

ಲೈಂಗಿಕ ಬಯಕೆಯ ಪೂರೈಕೆಯ ಫಲಶೃತಿಯೇ ಸಂತಾನೋತ್ಪತ್ತಿ. ತಮ್ಮ ವಂಶದ ಮುಂದುವರಿಕೆಯ ದೃಷ್ಟಿಯಿಂದಲೂ ಸಂತಾನೋತ್ಪತ್ತಿಯು ಒಂದು ಅವಶ್ಯಕ ಪ್ರಕ್ರಿಯೆಯಾಗಿದೆ. ಮಕ್ಕಳನ್ನು ಹಡೆದವರು ಪುಣ್ಯಾತ್ಮರು, ಮಕ್ಕಳಿರುವ ಮನೆ ನಂದಗೋಕುಲ ಮಕ್ಕಳೇ ಮನೆಗೆ ಮಾಣಿಕ್ಯ ಅಪುತ್ರಸ್ಯಗತಿರ್ನಾಸ್ತಿ ಪುತ್ರನಿಲ್ಲದೆ ಸಗ್ಗತಿ ದೊರೆಯಲಾರದು ಎನ್ನುವುದು ಪುರುಷ ಪ್ರಧಾನ ಸಮಾಜದ ನಂಬಿಕೆಯಾಗಿದೆ. ಇಂಥ ವ್ಯವಸ್ಥೆಯಲ್ಲಿ ಬದುಕುವ ಹೆಣ್ಣು ಮಕ್ಕಳಿಗೆ ಮಕ್ಕಳಾಗದಿದ್ದರೆ ಅವಳನ್ನು ಕ್ರೂರ ದೃಷ್ಟಿಯಿಂದ ನೋಡಲಾಗುವುದು.

ಮಹಿಳಾ ಕಂಡಕ್ಟರ್‌ಗಳು ಇಂಥದೊಂದು ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ದಿನದಲ್ಲಿ ಹೆಚ್ಚಿನ ಸಮಯವನ್ನು ಕೆಲಸದಲ್ಲಿಯೇ ನಿರತರಾಗಿರುವುದರಿಂದ ನಿಂತುಕೊಂಡೆ ಕೆಲಸ ಮಾಡುವುದರಿಂದ ಪದೇ ಪದೇ ಗರ್ಭಪಾತವಾಗುವುದು ಹಾಗೂ ತಾಯ್ತನಕ್ಕೆ ತೊಂದರೆಯಾಗುವುದು ಸಾಮಾನ್ಯವಾಗಿದೆ. ಜೊತೆಗೆ ಮಕ್ಕಳಾಗದೆ ಇದ್ದುದರಿಂದ ಗಂಡ-ಅತ್ತೆ ಮಾವಂದಿರರಿಂದ ನಿಂದನೆಗೆ ಒಳಗಾಗಿದ್ದೇವೆ ಎಂದು ನನ್ನ ಸಂಶೋಧನಾ ಅಧ್ಯಯನದಲ್ಲಿ ಬರುವ ಮಹಿಳಾ ಕಂಡಕ್ಟರ್‌ಗಳಾದ ಪಾರ್ವತಿ, ಸುನಿತಾ, ಮಹಾಲಕ್ಷ್ಮಿ, ತಮ್ಮ ಅನುಭವವನ್ನು ಮುಕ್ತವಾಗಿ ಹೇಳಿಕೊಂಡಿದ್ದಾರೆ.

### ಇ. ವಿವಾಹಕ್ಕೆ ತೊಂದರೆ :

ಸ್ತ್ರೀ ಇರಲಿ-ಪುರಷನಿರಲಿ ವಿವಾಹವಾಗಲೇ ಬೇಕು. ಆದರೆ ಈ ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣುಮಕ್ಕಳ ಜೀವನದ ಮುಖ್ಯ ಗುರಿ ವಿವಾಹವೇ ಎಂಬುದನ್ನು ಹೇಳಲಾಗಿದೆ. ಅವಳು ಸಮಾಜದ

ಜೀವಿಸಬೇಕಾದರೆ ವಿವಾಹ ಮುಖ್ಯ. ಅವಳ ಜೀವನದ ಸಾಫಲ್ಯ ಇರುವುದೇ ವಿವಾಹದಲ್ಲೆಂಬಂತೆ ಸಾಮಾಜೀಕರಣವನ್ನು ಸೃಷ್ಟಿಮಾಡಿದೆ. ಈ ರೀತಿಯ ಮೌಲ್ಯಗಳನ್ನು ಸೃಷ್ಟಿಸಿರುವುದು ಪುರುಷರೆ. ಅದೇ ರೀತಿ ಅವರ ಮದುವೆಗೆ ಅಡ್ಡಿಯುಂಟುಮಾಡುತ್ತಿರುವವರು ಪುರುಷರೇ. ಸಂಪ್ರದಾಯಸ್ಥ ಕುಟುಂಬದವರು ಮತ್ತು ಉದ್ಯೋಗಸ್ಥರು ಕಂಡಕ್ಟರ್ ಹುದ್ದೆಯಲ್ಲಿರುವ ಹೆಣ್ಣುಮಕ್ಕಳನ್ನು ವಿವಾಹ ಮಾಡಿಕೊಂಡರೆ ತನ್ನ ಸಹೋದ್ಯೋಗಿಗಳಲ್ಲಿ ತಮ್ಮ ಸ್ಥಾನಮಾನವೇನು ಎಂದು ಯೋಚಿಸುತ್ತಾರೆ. ಮನೆತನದ ದೃಷ್ಟಿಯಿಂದ ನೋಡಿದರೆ ಹಿರಿಯರರಲ್ಲಿ ಕಂಡಕ್ಟರ್‌ಗಳಾದವರು ಸೊಸೆಯಾಗಿ ಮರ್‍ಯಾದೆಯಿಂದ ಮನೆತನ ನಡೆಸಲಿಕ್ಕೆ ಅನರ್ಹರು. ಉದ್ಯೋಗಸ್ಥರು, ತಮ್ಮ ಹೆಂಡತಿಯಾಗುವವಳು ಉದ್ಯೋಗ ಮಾಡುವುದು ಬೇಡ ನಮ್ಮ ಸಂಪಾದನೆಯೇ ಬೇಕಾದಷ್ಟಿರುವುದರಿಂದ ಅವಳು ಹಾಯಾಗಿ ಮನೆಯಲ್ಲಿ ಕೂತು ನಗು ನಗುತ್ತಾ ಕಾಲ ಕಳೆದರೆ ಸಾಕು ಎಂಬ ನೆಪ್ಪ ಹೇಳಿ ಈ ಉದ್ಯೋಗದಿಂದ ಬಿಡಿಸಬೇಕು ಎಂದು ಈ ರೀತಿಯಾಗಿ ಹೇಳುತ್ತಾರೆ. ಗಳಿಕೆಯಲ್ಲಿ ತನಗಿಂತ ಹೆಚ್ಚಿನ ಸಾಧನೆಯನ್ನು ಮಾಡಿದ ಹೆಂಡತಿಯನ್ನು ಒಪ್ಪಿಕೊಳ್ಳುವುದಿಲ್ಲ ಎಂದು ತನ್ನ ಸಂಶೋಧನೆ ಅಧ್ಯಯನದಲ್ಲಿ ಬರುವ ಕೆಲವು ಮಹಿಳಾ ಕಂಡಕ್ಟರ್‌ಗಳಾದ ದೀಪ, ಸವಿತ ಚಂದ್ರಕಲಾ, ಮಂಗಳ, ಗೀತಾ, ಶೋಭಾ (ಹೆಸರು ಬದಲಾಯಿಸಲಾಗಿದೆ) ತಮ್ಮ ಅನುಭವಗಳನ್ನು ಹೇಳಿಕೊಂಡಿದ್ದಾರೆ. ಇನ್ನು ಕೆಲವು ಮಹಿಳಾ ಕಂಡಕ್ಟರ್‌ಗಳು ಶಿಕ್ಷಕಿ ಉದ್ಯೋಗ ಮಾಡುತ್ತಿರುವ ಮಹಿಳೆಯರಿಗೆ ಸಮಾಜದಲ್ಲಿ ಸಿಕ್ಕಷ್ಟು ಗೌರವ ಸ್ಥಾನಮಾನ ನಮಗೆ ಸಿಗುತ್ತಿಲ್ಲ. ನಮ್ಮ ಜೊತೆಗೆ ಓದಿದ ಗೆಳತಿಯರು ಶಿಕ್ಷಕಿಯರಾಗಿದ್ದಾರೆ. ಅವರಿಗೆ ಬೇಗ ಬೇಗ ಮದುವೆಯಾಯಿತು. ಅಕ್ಕಪಕ್ಕದವರು ಕೂಡ ಕಂಡಕ್ಟರ್ ಕೆಲಸದಲ್ಲಿ ಇರುವುದರಿಂದಲೇ ಇವರಿಗೆ ಮದುವೆಯಾಗುತ್ತಿಲ್ಲ ಎಂದು ನಮ್ಮನ್ನು ಹೀಯಾಳಿಸಿ ಮಾತನಾಡುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಅನುಭವನ್ನು ತೋಡಿಕೊಂಡಿದ್ದಾರೆ.



**ಈ. ಶೀಲದ ಪರಿಕಲ್ಪನೆ :**

ಮನುಷ್ಯನ ಬದುಕಿನ ಮೂಲಭೂತ ಅವಶ್ಯಕತೆಗಳಲ್ಲಿ ಲೈಂಗಿಕತೆಯು ಒಂದು. ಆದರೆ ಈ ಲೈಂಗಿಕತೆಯು ಮಾನ್ಯವಾಗುವುದು ಅವಶ್ಯಕತೆ ಪಡೆಯುವುದು ವಿವಾಹ ನಂತರವೇ. ಇದು ಸ್ತ್ರೀ-ಪುರುಷರಿಬ್ಬರಿಗೂ ಅನ್ವಯಿಸಿದರೂ ವಿವಾಹ ಪೂರ್ವದಲ್ಲಿನ ಲೈಂಗಿಕ ಕ್ರಿಯೆಯಲ್ಲಿ ಪುರುಷನಿಗೆ ಯಾವುದೇ ರೀತಿಯ ನಿಯಂತ್ರಣ ಇಲ್ಲ ಹಾಗೂ ಸ್ತ್ರೀಗೆ ಇರುವಂತಹ ಶೀಲದ ಕಲ್ಪನೆಯೂ ಇಲ್ಲ. ಸ್ವಚ್ಛಂದವಾಗಿ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಸಾಮಾಜಿಕ ಸಂದರ್ಭ ಅವನಿಗಿದೆ. ಆದರೆ ಮಹಿಳೆ ಮಾನ್ಯತೆ ಪಡೆಯಬೇಕಾದರೆ ಸಮಾಜದ ಜೀವಿಯಾಗಬೇಕಾದರೆ ವಿವಾಹ ಮುಖ್ಯ ಎಂದು ಈ ಪುರುಷಪ್ರಧಾನ ಸಮಾಜ ಹೇಳುತ್ತದೆ.

ಶೀಲದ ಪರಿಕಲ್ಪನೆಯ ಓನ್ನೆಲೆಯಲ್ಲಿ ಮಹಿಳಾ ಕಂಡಕ್ಟರ್‌ರ ಒಂದು ಸೂಕ್ಷ್ಮ ನೆಲೆ ಹೀಗಿದೆ. ಧರ್ಮದ ನೆಲೆಗಟ್ಟಿನಲ್ಲಿ ನೋಡಿದರೆ ಮನುಕುಲದ ಸೃಷ್ಟಿ ಹಾಗೂ ಲಾಲನೆ-ಪೋಷಣೆಗಳನ್ನು ಹೊತ್ತ ಸ್ತ್ರೀಗೆ ಯಾವ ಧರ್ಮವು ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಿಲ್ಲ. ಅವಳಿಗೆ ನೀಡಿರುವ ಜವಾಬ್ದಾರಿಗಳು

ಹಲವು, ಹೇರಿರುವ ನಿರ್ಬಂಧಗಳು ನೂರಾರು. ಸ್ತ್ರೀಯರಿಗೆ ನೀಡಿದ್ದಂಥ ಹಕ್ಕುಗಳನ್ನು ಕೂಡ ಅವಳು ಸಂಸಾರ ಎಂಬ ಸಾಂಸ್ಥಿಕ ಚೌಕಟ್ಟಿನ ಒಳಗೆ ಮಾತ್ರ. ನಿರ್ಬಂಧವಂತೂ ಇಂದಿಗೂ ಆಚರಣೆಯಲ್ಲಿದ್ದು, ಬಹುಪಾಲು ಸ್ತ್ರೀಯರು ಈ ಸಂಸ್ಕೃತಿಯ ಹೆಣ್ಣು ಪರಪುರುಷರ ಜೊತೆ ಮಾತನಾಡಬಾರದು. ಪರಪುರುಷನನ್ನು ನೆನಪು ಮಾಡಿಕೊಳ್ಳುವುದು ಕೂಡ ಶೀಲಗೆಟ್ಟವಳು ಎನ್ನುವ ಪರಿಕಲ್ಪನೆ ಇದೆ. ಉದಾ: ಎಲ್ಲಮ್ಮನ ಕಥೆ ಸಾಕ್ಷಿಯಾಗಿದೆ. ಇಂಥಹ ಪರಿಕಲ್ಪನೆಗಳು ನಮ್ಮ ಸಂಸ್ಕೃತಿಯಲ್ಲಿ ಇರುವಾಗ ಮಹಿಳಾ ಕಂಡಕ್ಟರ್‌ಗಳು ದಿನದಲ್ಲಿ ೧೩-೧೪ ತಾಸು ಸಾರ್ವಜನಿಕರ ಮಧ್ಯನೇ ಕೆಲಸ ಮಾಡುತ್ತಿದ್ದಾರೆ. ಅಂತಹ ಸಮಯದಲ್ಲಿ ಜನರ ಜೊತೆ ಮಾತನಾಡಬೇಕಾಗುತ್ತದೆ. ಟಿಕೆಟ್ ಕೊಡುವಾಗ ಅವರ ಕೈ ತಗುಲುತ್ತದೆ. ಅಂತ ಸನ್ನಿವೇಶಗಳನ್ನು ನೋಡಿ ಗಂಡನಾದವನು ಅಥವಾ ಅಣ್ಣ-ತಂದೆ ರಾತ್ರಿ ಡ್ಯೂಟಿ ಮುಗಿಸಿಕೊಂಡು ಬಂದಾಗ ಜಗಳವಾಡುತ್ತಾರೆ. ನೀನು ಕೆಟ್ಟು ಹೋಗಿದ್ದೀಯಾ ಅಂಥ ಜಗಳವಾಡುತ್ತಾರೆ. ನಮ್ಮ ಶೀಲದ ಬಗ್ಗೆ ಶಂಕಿಸುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಹೆಣ್ಣಿನ ಶೀಲದ ಬಗ್ಗೆ ಅನುಮಾನ ಪಡುವುದು ಇಂದಿನ ವಿಷಯವಲ್ಲ. ರಾಮಾಯಣ ಮತ್ತು ಮಹಾಭಾರತಗಳಂತಹ ಗ್ರಂಥಗಳಲ್ಲಿಯೇ ಇದಕ್ಕೆ ಹೇರಳ ಉದಾಹರಣೆಗಳು ದೊರೆಯುತ್ತವೆ. ಭಾರತೀಯ ಸ್ತ್ರೀಯ ಸ್ಥಾನವನ್ನು ಕುರಿತಂತೆ ಧೋರಣೆಗಳು ಹಾಗೂ ಆಚರಣೆಗಳನ್ನು ರೂಪಿಸುವಲ್ಲಿ ಇವು ಪ್ರಮುಖ ಪಾತ್ರವಹಿಸಿವೆ. ಮಹಾಭಾರತದ ದ್ರೌಪದಿ ಪಾತ್ರಕ್ಕಿಂತ ರಾಮಾಯಣದ ಸೀತೆಯ ಪಾತ್ರವನ್ನು ಆದರ್ಶನಾರಿಯ ಸ್ಥಾನಕ್ಕೇರಿಸಲಾಗಿದೆ. ಕಾಡಿನಲ್ಲಿ ಅಪಹರಣಕ್ಕೆ ಒಳಗಾದ ಸೀತೆ ತನ್ನ ಪತಿಯಲ್ಲಿ ಅಚಲವಾದ ನಂಬಿಕೆಯನ್ನು ಇರಿಸಿಕೊಂಡಿದ್ದರೂ ರಾಮ ಆಕೆಯ ಪಾತಿವ್ರತ್ಯವನ್ನು ಪರೀಕ್ಷೆಗೆ ಒಡ್ಡಿದಂಥ ಪರಿಸ್ಥಿತಿಯನ್ನು ಸಹಜ ಪುರುಷ ಹಕ್ಕು ಎಂದು, ಸೀತೆಯೊಬ್ಬಳೆ ಏಕೆ ಬಹುಮಂದಿ ಒಪ್ಪಿದಂತಿದೆ. ರಾಮನಿಂದ ದೂರವಾಗಿದ್ದ ಸೀತೆ ರಾಮನನ್ನು ಇಂತಹದೇ ಅಗ್ನಿಪರೀಕ್ಷೆಗೆ ಏಕೆ ಒಳಪಡಿಸಲಿಲ್ಲ? ಇಂದಿನ ಆಧುನಿಕ ಕಾಲದಲ್ಲಿ ಅರ್ಧರಾತ್ರಿ ಒಂಟಿಯಾಗಿ ಮಹಿಳೆ ಮನೆಗೆ ಬಂದರೆ ಅವಳ ಶೀಲದ ಬಗ್ಗೆ ಶಂಕಿಸುವ ಸಮಾಜ ಜೀವಂತವಿರುವಾಗ ಇನ್ನು ಮಹಿಳಾ ಕಂಡಕ್ಟರ್‌ಗಳು ದಿನದ ೧೩-೧೪ ತಾಸು ಸಾರ್ವಜನಿಕರ ಮಧ್ಯದಲ್ಲಿ ಮತ್ತು ಪುರುಷರ ಸಹೋದ್ಯೋಗಿಗಳ ಜೊತೆ ಕೆಲಸ ಮಾಡುವಂತಹ ಸಂದರ್ಭಗಳಲ್ಲಿ ಶೀಲದ ಬಗ್ಗೆ ಶಂಕಿಸದೆ ಇರುತ್ತಾರೆಯೇ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಮನದ ನೋವನ್ನು ಹೇಳಿಕೊಂಡರು.

### ೩.೪ ಆರೋಗ್ಯದ ಸಮಸ್ಯೆ :

ಈ ಪುರಷ ಪ್ರಧಾನ ಸಮಜದಲ್ಲಿ ಸ್ತ್ರೀಯರು ಎರಡನೇ ದರ್ಜೆಯ ಪ್ರಜೆಗಳಾಗಿ ಅನೇಕ ಸೌಲಭ್ಯ ಸವಲತ್ತುಗಳಿಂದ ವಂಚಿತರಾಗಿರುವುದು ವಾಸ್ತವಿಕ ಕಟುಸತ್ಯ. ಸ್ತ್ರೀಯಾದವಳು ತಂದೆಯ, ಗಂಡನ, ಮಗನ ಅಧೀನದಲ್ಲಿರಬೇಕಾದವಳು ಎಂದು ನಂಬುವವರ ಸಂಖ್ಯೆ ಗಂಡಸರಂತೆ ಸ್ತ್ರೀಯರಲ್ಲೂ ಹೆಚ್ಚು ಎನ್ನುವುದು ಒಂದು ದೊಡ್ಡ ವಿಪರ್ಯಾಸ.

ಮಹಿಳಾ ಆರೋಗ್ಯ ಸ್ವಾಸ್ಥ್ಯಸಮಾಜ ನಿರ್ಮಾಣಕ್ಕೆ ಅತ್ಯಂತ ಅವಶ್ಯಕವಾದುದು. ಅವಳ ದೈಹಿಕ ಮಾನಸಿಕ ಆರೋಗ್ಯಗಳು ಒಂದು ದೇಶದ ಆರೋಗ್ಯ ಕಾಪಾಡುವಲ್ಲಿ ಸಹಾಯಕವಾಗುತ್ತದೆ. ಸ್ತ್ರೀ ಸಬಲೀಕರಣ ತುಂಬ ಪ್ರಮುಖವಾದ ವಿಚಾರವಾಗಿದೆ. ಇತ್ತೀಚಿಗೆ ಮಹಿಳೆಯರು ಮನೆಯಿಂದ ಹೊರಬಂದು ವಿವಿಧ ಕ್ಷೇತ್ರಗಳಲ್ಲಿ ದುಡಿದು ಸಂಪಾದಿಸುತ್ತಿದ್ದಾಳೆ. ಈ ಆರ್ಥಿಕ ಸ್ವಾತಂತ್ರ್ಯ ಸ್ವಾವಲಂಬಿತನದ ಫಲ ಮಾತ್ರ ಆಕೆಗೆ ಸಿಗುತ್ತಿಲ್ಲ. ಗಂಡನ ಮಕ್ಕಳ ಮನೆಮಂದಿಯ ಕಲ್ಯಾಣಕ್ಕೆ ಸ್ತ್ರೀ-ಮೀಸಲು. ಆಕೆ ತನ್ನ ಕಲ್ಯಾಣದ ಬಗ್ಗೆ ಚಿಂತಿಸುವುದು ಸ್ವಾರ್ಥದ ಲಕ್ಷಣ. ಆಕೆಗೆ ಅಭಿಪ್ರಾಯ ಸ್ವಾತಂತ್ರ್ಯವಿಲ್ಲ. ತನ್ನ ಅನಿಸಿಕೆ ಅನುಭವಗಳನ್ನು ಪ್ರಕಟಿಸುವ ಅವಕಾಶವಿಲ್ಲ. ಆಕೆಯ ಆಸೆಆಕಾಂಕ್ಷೆ ಪ್ರತಿಭಟನೆಗಳಿಗೆ ಮಾನ್ಯತೆ ಇರುವುದಿಲ್ಲ. ಈ ಸಾಮಾಜಿಕ ವೈಪರೀತ್ಯಗಳ ಜೊತೆಗೆ ಸ್ತ್ರೀಗೆ ಕೆಲವು ಜೈವಿಕ ಜವಾಬ್ದಾರಿಗಳು ಹಾಗೂ ಸಮಸ್ಯೆಗಳಿವೆ. ಋತುಚಕ್ರ, ಗರ್ಭಧಾರಣೆ, ಹೆರಿಗೆ-ಮಕ್ಕಳ ಲಾಲನಾ-ಪಾಲನೆಯಲ್ಲಿ ಅವಳು ಜರ್ಝರಿತಳಾಗುತ್ತಾಳೆ.

ಮಹಿಳಾ ಕಂಡಕ್ಟರ್‌ಗಳ ಆರೋಗ್ಯ ಸ್ಥಿತಿಯಂತೂ ಹೇಳತೀರದು. ದಿನದ ಹೆಚ್ಚಿನ ಸಮಯ ಕೆಲಸದಲ್ಲಿ ನಿರತರಾಗಿರುವ ಇವರು ದೈಹಿಕವಾಗಿ, ಮಾನಸಿಕವಾಗಿ ಅನಾರೋಗ್ಯಕ್ಕೆ ಈಡಾಗಿದ್ದೇವೆ ಎಂದು ಹೇಳಿದ್ದಾರೆ. ದಿನದಲ್ಲಿ ೧೩-೧೪ ತಾಸು ನಿಂತುಕೊಂಡೆ ಕೆಲಸ ಮಾಡುವುದರಿಂದ ಇಂತ ಮಹಿಳೆಯರಿಗೆ ಬಿಡುವು ಕನ್ನಡಿಯ ಗಂಟು. ಸಂಸಾರ ನಿರ್ವಹಣೆ, ಉದ್ಯೋಗ ಸ್ಥಳದಲ್ಲಿನ ಪ್ರಯಾಣಿಕರ, ಮೇಲಾಧಿಕಾರಿಗಳ, ಸಹೋದ್ಯೋಗಿಗಳ ವರ್ತನೆಯಿಂದ ಮಾನಸಿಕವಾಗಿ ಅನಾರೋಗ್ಯಕ್ಕೆ ಈಡಾಗಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದ್ದಾರೆ. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಜೈವಿಕ ಕ್ರಿಯೆಗಳ ಸಂದರ್ಭಗಳಾದ ತಿಂಗಳ ಮುಟ್ಟಿನ ಸಂದರ್ಭದಲ್ಲಿ ಮಾನಸಿಕವಾಗಿ ತುಮುಲಗಳಿಗೆ ಒಳಗಾಗಿದ್ದೇವೆ. ಬಸ್‌ನಲ್ಲಿ ನಿಂತುಕೊಂಡೆ ಕೆಲಸ ಮಾಡುವುದರಿಂದ ಇಂತಹ ಸಂದರ್ಭದಲ್ಲಿ ಮಾನಸಿಕವಾಗಿ ಖಿನ್ನತೆಗೆ ಒಳಗಾಗಿದ್ದೇವೆ. ಹೊಟ್ಟೆ ನೋವು, ಸೊಂಟ ನೋವು, ಕೈಕಾಲು ಹರಿತದಿಂದ ಕೆಲಸ ಮಾಡುವುದಕ್ಕೆ ಆಗುವುದಿಲ್ಲ. ಯಾವಾಗಲೂ ಬಸ್‌ನಲ್ಲಿ ಇರುವುದರಿಂದ ಹೀಟ್ ಆಗಿ ತಿಂಗಳಿಗೆ ಎರಡು ಸಾರಿ ಮುಟ್ಟಾಗುತ್ತಿದ್ದೇವೆ ಎಂದು ಹೇಳಿದರು. ಪದೇ ಪದೇ ಗರ್ಭಪಾತವಾಗುತ್ತಿರುವುದರಿಂದ ದೈಹಿಕವಾಗಿ ತುಂಬ ಬಳಲಿದ್ದೇವೆ. ಈ ರೀತಿ ಗರ್ಭಪಾತವಾದಾಗಲು ರಜೆ ಕೊಡುವುದಿಲ್ಲ. ಬಸ್‌ನಲ್ಲಿ ತುಂಬಾ ಗಾಳಿ ಬಡಿಯುವುದರಿಂದ ಮತ್ತು ರಸ್ತೆಗಳು ಸರಿಯಿಲ್ಲದೆ ತುಂಬಾ ತಗ್ಗು ದಿನ್ನಿ ಇರುವುದರಿಂದ ಅಂತಹ ಸಂದರ್ಭದಲ್ಲಿ ಹೊಟ್ಟೆನೋವು ಬರುತ್ತದೆ. ಗಾಳಿ ಬಡಿಯುವುದರಿಂದ ತಲೆನೋವು, ಜ್ವರ ಬರುತ್ತೆ. ಎರಡು ದಿನ ಆರೋಗ್ಯ ಸರಿಯಾಗಿ ಇದ್ದರೆ ಇನ್ನೆರಡು ದಿನ ಸರಿಯಾಗಿರುವುದಿಲ್ಲ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವರು ಶ್ವಾಸಕೋಶದ ತೊಂದರೆಯನ್ನು ಅನುಭವಿಸುತ್ತಿದ್ದಾರೆ. ಉಸಿರಾಟಕ್ಕೆ ತೊಂದರೆಯಾಗಿ ಆಪರೇಶನ್ ಆಗಿದೆ. ತುಂಬಾ ದೂಳಿನಿಂದ ಕ್ಷಯ, ಕ್ಯಾನ್ಸರ್‌ನಂತಹ ರೋಗಗಳಿಗೆ ತುತ್ತಾಗಿದ್ದಾರೆ.

## ಅ. ಶ್ವಾಸಕೋಶದ ತೊಂದರೆ :

ಮನುಷ್ಯನ ದೇಹದಲ್ಲಿ ಈ ಒಂದು ಭಾಗ ಬಹುಮುಖ್ಯವಾದುದಾಗಿದೆ. ಮನುಷ್ಯ ಊಟ ಇಲ್ಲದೆ, ನೀರು ಇಲ್ಲದೇ ಸ್ವಲ್ಪ ಸಮಯ ಬದುಕಬಹುದು. ಮನುಷ್ಯನ ದೇಹಕ್ಕೆ ಗಾಳಿ ಇಲ್ಲದಿದ್ದರೆ ಬದುಕಲು ಸಾಧ್ಯವಿಲ್ಲ. ಶ್ವಾಸಕೋಶದ ಭಾಗಕ್ಕೆ ತೊಂದರೆಯಾದರೆ ಸರಿಪಡಿಸುವುದು ತುಂಬಾ ಕಷ್ಟ. ಅಂತಹ ಒಂದು ಸಮಸ್ಯೆಯನ್ನು ಸಾರ್ವಜನಿಕ ವಲಯದಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ಕಂಡಕ್ಟರ್‌ಗಳು ಬಸ್‌ನಲ್ಲಿ ಓಡಾಡುವುದರಿಂದ ತುಂಬಾ ಧೂಳಿನಿಂದ ಶ್ವಾಸಕೋಶದ ತೊಂದರೆಯನ್ನು ಎದುರಿಸುತ್ತಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

## ಆ. ಋತುಚಕ್ರದಲ್ಲಿ ಏರುಪೇರು :

ಋತುಚಕ್ರ ಒಂದು ಸಹಜ ಜೈವಿಕ ಕ್ರಿಯೆ. ಸ್ತ್ರೀ ಸಂತಾನ ವ್ಯವಸ್ಥೆಯಲ್ಲಿ ನಡೆಯುವ ಪ್ರಮುಖ ಚಟುವಟಿಕೆಗಳಲ್ಲಿ ಋತುಕ್ರಿಯೆಯು ಸಹ ಒಂದು. ಪ್ರತಿ ತಿಂಗಳು ಪ್ರಬುದ್ಧ ಮಹಿಳೆ ಗರ್ಭಕೋಶದಿಂದ ಬಸರುವ ರಕ್ತಸ್ರಾವವೇ ತಿಂಗಳ ಮುಟ್ಟು. ಕೆಲಸದ ಒತ್ತಡದಿಂದ, ಉಷ್ಣವಾಗುವುದರಿಂದ ಕ್ರಮ ತಪ್ಪಬಹುದು ಅಥವಾ ರಕ್ತಸ್ರಾವವಾಗಬಹುದು. ಇಲ್ಲವೇ ರಕ್ತಸ್ರಾವ ಬಹುಕಾಲ ಮುಂದುವರಿಯಬಹುದು. ಈ ರೀತಿಯಾಗುವುದರಿಂದ ಮಹಿಳೆಯರಿಗೆ ಕಿರಿಕಿರಿ ಮತ್ತು ಆತಂಕ ತಂದೊಡ್ಡುತ್ತವೆ. ಮಾನಸಿಕ ಹಿಂಸೆ ರಕ್ತಸ್ರಾವದಿಂದ ನಿಶಕ್ತಿ ಅನಿಮಿಯಾ ಮುಂತಾದವುಗಳು ತಲೆದೋರುತ್ತವೆ.

ಹೆಣ್ಣಿಗೆ ಪ್ರಕೃತಿ ಋತುಚಕ್ರವನ್ನು ವರವನ್ನಾಗಿ ನೀಡಿದೆಯಾದರೂ ಇದು ತುಸು ಏರುಪೇರಾದರೂ ಶಾಪವಾಗಿಯೂ ಪರಿಣಮಿಸಬಲ್ಲದು ಎನ್ನಲು ಇಂಥದೊಂದು ಉತ್ತಮ ಉದಾ: ದಿನದಲ್ಲಿ ೧೩-೧೪ ತಾಸು ನಿಂತುಕೊಂಡೆ ಕೆಲಸ ಮಾಡುವುದರಿಂದ ತುಂಬಾ ಹೀಟ್ ಆಗಿ ತಿಂಗಳಿಗೆ ಎರಡು ಸಾರಿ ಮುಟ್ಟು ಆಗುತ್ತಾರೆ. ಆದ್ದರಿಂದ ನಮಗೆ ರಕ್ತಸ್ರಾವದಿಂದ ಅನಿಮಿಯಾದಂತಹ ರೋಗಗಳಿಗೆ ಒಳಗಾಗಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಆರೋಗ್ಯದ ಸಮಸ್ಯೆಯನ್ನು ಹೇಳಿಕೊಂಡರು.

## ಇ. ಗರ್ಭಪಾತ :

ಮಹಿಳೆಗೆ ನಿಸರ್ಗ ನೀಡಿದ ವಿಶಿಷ್ಟ ಕೊಡುಗೆಯೆಂದರೆ ಫಲವಂತಿಕೆ. ಆಕೆಗೆ ಸಮಾಜದಲ್ಲಿ ಸ್ಥಾನಮಾನವೇನಾದರೂ ದೊರೆತಿದ್ದರೆ ಅದು ಈ ಕಾರಣದಿಂದಾಗಿಯೇ ಎಂಬುದು ಸತ್ಯ. ಫಲವಂತಿಕೆಯಿಂದಾಗಿ ಹೆಣ್ಣನ್ನು ನಿಸರ್ಗದೊಂದಿಗೆ ಹೋಲಿಸುತ್ತಾರೆ. ಹೆಣ್ಣಿನ ಗರ್ಭಧಾರಣ ಶಕ್ತಿಗೂ ಭೂಮಿಯ ಸಸ್ಯಧಾರಣ ಶಕ್ತಿಗೂ ಸಂಬಂಧ ಕಲ್ಪಿಸುತ್ತಾರೆ. 'ಗದ್ದೆಗೆ ನೀರು ಚೆಂದ ಹೆಂಗಸಿಗೆ ಬಸಿರು ಚೆಂದ' ಎಂಬ ಗಾದೆ ಮಾತು ನೆನಪಿಗೆ ಬರುತ್ತದೆ. ಫಲ ಬಿಡುವ ವೃಕ್ಷಕೆ ಹೆಣ್ಣನ್ನು ಹೋಲಿಸುವುದು ಆಕೆಯ ಋತುಚಕ್ರ ಸ್ಥಗಿತಗೊಳ್ಳುತ್ತಿರವವರೆಗಿನ ಘಟ್ಟವನ್ನು ಫಲವಂತಿಕೆಯ ಕಾಲ ಎಂದು ಗುರುತಿಸಲಾಗುವುದು. ಪ್ರತಿ ತಿಂಗಳು ಹೆಣ್ಣಿನ ಗರ್ಭದಿಂದ ಹೊರಹೊಮ್ಮುವ ಅಂಡಾಣುಗಳು ಆವಳ ಫಲವಂತಿಕೆಯ ಸಾಮರ್ಥ್ಯವನ್ನು ಸೂಚಿಸುತ್ತವೆ.

ಭಾರತೀಯರಲ್ಲಿ ಮದುವೆಯ ಮುಖ್ಯ ಉದ್ದೇಶ ಲೈಂಗಿಕ ತೃಪ್ತಿಗಿಂತ ಮಿಗಿಲಾಗಿ ಸಂಬಂಧಗಳು ಮುಂದುವರಿಕೆಯಾಗಿದೆ. ವಂಶೋದ್ಧಾರಕ್ಕೆ ಬಳಹ ಪ್ರಾಮುಖ್ಯತೆ ಇರುವುದರಿಂದ ಫಲವಂತಿಕೆಗೆ ಮಹತ್ವ ನೀಡಲಾಗಿದೆ. ಮಕ್ಕಳಿಲ್ಲದ ಮಹಿಳೆಯನ್ನು ಸಮಾಜ ಕ್ರೂರದೃಷ್ಟಿಗೆ ಬೀಳಿಸುತ್ತದೆ. ಇದೆ ಪರಿಸ್ಥಿತಿಯನ್ನು ಮಹಿಳಾ ಕಂಡಕ್ಟರ್‌ಗಳು ಎದುರಿಸುತ್ತಿದ್ದಾರೆ. ಇವರು ದಿನ ೧೫-೧೬ ತಾಸು ಬಸ್‌ನಲ್ಲಿ ನಿಂತುಕೊಂಡೆ ಕೆಲಸ ಮಾಡುವುದರಿಂದ ಅಘರ ತಾಯ್ತನಕ್ಕೆ ತೊಂದರೆಯಾಗುತ್ತಿವೆ. ರಸ್ತೆಗಳು ದುರಸ್ತಿಯಲ್ಲಿರುವುದರಿಂದ ಅದರಿಂದ ಅದು ಅವರ ತಾಯ್ತನಕ್ಕೆ ತೊಂದರೆಯಾಗುತ್ತಿದೆ. ಇವರಿಗೆ ಈ ರೀತಿ ಪದೇ ಪದೇ ಗರ್ಭಪಾತವಾಗುವುದರಿಂದ ಮಹಿಳಾ ಕಂಡಕ್ಟರ್‌ಗಳು ತಾಯಿಯರಾಗುತ್ತಿಲ್ಲ. ಆದ್ದರಿಂದ ಗಂಡ-ಅತ್ತೆ-ಮಾವರಿಂದ ನಿಂದನೆಗೆ ಒಳಗಾಗುತ್ತಿದ್ದಾರೆ. ಮಕ್ಕಳಿಲ್ಲದ ಬಂಜೆಯಾಗಿ ಈ ಪ್ರಪಂಚದಲ್ಲಿ ಇರಬಾರದು ಎಂಬ ನಂಬಿಕೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಬೇರು ಬಿಟ್ಟಿರುವುದು. ತಾಯಿಯಾಗದಿದ್ದಲ್ಲಿ ಬಂಜೆ ಎನಿಸಿಕೊಂಡು ಸಮಾಜದ ಕಣ್ಣಲ್ಲಿ ಹೆಣ್ಣುಅಪರಾಧಿಯಾಗುತ್ತಾಳೆ. ಮಕ್ಕಳಿಲ್ಲದಕ್ಕಾಗಿ ಗಂಡನಾದವನು ಇನ್ನೊಂದು ಮದುವೆಯನ್ನು ಕೂಡ ಮಾಡಿಕೊಳ್ಳಲು ಸಂಚು ನಡೆಸುತ್ತಾನೆ ಎಂದು ಹೇಳಿದ್ದಾರೆ. ಹೆಂಗಸಿನ ವಿಷಯದಲ್ಲಿ ತಾಯ್ತನವನ್ನು ಒಂದು ಮೌಲ್ಯವಾಗಿ ಅವಳ ಮೇಲೆ ಹೇರಿದೆ. ಆತನ ವಂಶದ ಮುಂದುವರಿಕೆಗೆ ವಾರಸುದಾರ ಬೇಕೆಂದು ಮಾತ್ರ ಬಯಸುತ್ತದೆ. ಹೆಂಡತಿ ಕರುಳ ಬಳ್ಳಿಯು ಭಾವನಾತ್ಮಕ ಸಂಬಂಧಕ್ಕಿಂತ ವಾರಸುತದ ವ್ಯವಹಾರಿಕ ಸಂಬಂಧವೇ ಇಲ್ಲಿ ಮುಖ್ಯವಾಗಿದೆ. ಹೆಣ್ತನ ಪರಿಪೂರ್ಣವಾಗುವುದು ತಾಯ್ತನದ ಬಿಂದುವಿನಲ್ಲಿ ಎಂದೇ ನಂಬಿಸುತ್ತ ಬರಲಾಗಿದೆ. ಅದರಿಂದಾಗಿ ಹೆಂಗಸಿನ ಯಾವುದೇ ಸಾಧನೆಯು ಮುಖ್ಯವೆಂದು ಪರಿಗಣಿತವಾಗುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಆಕೆ ಅದನ್ನೆ ನಿಜವೆಂದು ಭಾವಿಸುತ್ತಾಳೆ. ಹೆಣ್ತನ ಗೆದ್ದಷ್ಟು ಸುಲಭವಾಗಿ ನನಗೆ ತಾಯ್ತನವನ್ನು ಗೆಲ್ಲಲಿಕ್ಕೆ ಆಗಲೇ ಇಲ್ಲ ಎನ್ನುವ ಭಾವನಾತ್ಮಕ ನೆಲೆ ಅವಳದಾಗಿದೆ. ಲೈಂಗಿಕತೆಗೂ ವೈವಾಹಿಕ ಸ್ಥಿತಿಗೂ ತಾಯ್ತನಕ್ಕೂ ಪೂರಕ ಸಂಬಂಧಗಳಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳುತ್ತಾರೆ. ಆದ್ದರಿಂದ ಅವಳ ತಾಯ್ತನಕ್ಕೆ ತೊಂದರೆ ಆಗದಂತೆ ಅವಳು ಗರ್ಭವತಿಯಾದಗ ಅವಳಿಗೆ ಸ್ವಲ್ಪ ದಿನಗಳ ಮಟ್ಟಿಗೆ ರಜೆಯನ್ನು ಕೊಟ್ಟರೆ ಅವಳ ತಾಯ್ತನಕ್ಕೆ ತೊಂದರೆಯಾಗುವುದಿಲ್ಲ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

**ಲೈಂಗಿಕ ಕಿರುಕುಳ :**

ಆಧುನಿಕ ಕಾಲದಲ್ಲಿ ಸ್ತ್ರೀಯರು ಪುರುಷರ ಜೊತೆಗೆ ವಿವಿಧ ಉದ್ಯೋಗ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಸ್ತ್ರೀ ಎಂಬ ಕಾರಣಕ್ಕೆ ಅವರು ಹಲವಾರು ವಿಧದ ಕಿರುಕುಳವನ್ನು ಎದುರಿಸುತ್ತಿದ್ದಾರೆ. ಸಹೋದ್ಯೋಗಿಗಳು ಅಸಹ್ಯ ಹಾಗೂ ಅಸಭ್ಯ ವರ್ತನೆಯನ್ನು ಪ್ರದರ್ಶಿಸುತ್ತಾರೆ. ಅನವಶ್ಯಕವಾಗಿ ಸ್ತ್ರೀಯರನ್ನು ಕೆಲಸದ ಅವಧಿಗೆ ಮೀರಿ ಸ್ಥಳದಲ್ಲಿರುವಂತೆ ಒತ್ತಾಯಿಸಿವುದು. ಈ ರೀತಿಯಾದಂತಹ ಕಿರುಕುಳಕ್ಕೆ ಒಳಪಡಿಸಲಾಗುತ್ತದೆ. ನಾಲ್ಕು ಗೋಡೆಗಳ ಮಧ್ಯನೇ ಮೇಲಾಧಿಕಾರಿಗಳಿಂದ ಮತ್ತು ಸಹೋದ್ಯೋಗಿಗಳಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿರುವಾಗ ಸಾರ್ವಜನಿಕರ ಮಧ್ಯೆ ಉದ್ಯೋಗ

ಮಾಡುವಂತಹ ಮಹಿಳಾ ಕಂಡಕ್ಟರ್‌ಗಳು ಮೇಲಾಧಿಕಾರಿಗಳಿಂದ ಮತ್ತು ಸಹೋದ್ಯೋಗಿಗಳಿಂದ ಪ್ರಯಾಣಿಕರಿಂದ ಅನೇಕ ಬಗೆಯ ಕಿರುಕುಳಗಳನ್ನು ಅನುಭವಿಸುತ್ತಿದ್ದಾರೆ.

ಮಹಿಳಾ ಕಂಡಕ್ಟರ್‌ಗಳ ಮೇಲೆ ಜರುಗುತ್ತಿರುವ ಸೌಮ್ಯ ಸ್ವರೂಪದೆಂದು ಕಂಡುಬರುವ, ಆದರೆ ಅದನ್ನು ಅನುಭವಿಸುವ ಮಹಿಳೆಯನ್ನು ತೀವ್ರ ಸ್ವರೂಪದ ಮಾನಸಿಕ ಹಿಂಸೆಗೆ ಒಳಪಡಿಸುವ ವಿಶೇಷ ಬಗೆಯ ದೌರ್ಜನ್ಯವೆಂದರೆ ಲೈಂಗಿಕ ಕಿರುಕುಳ. ಇಂತಹ ದೌರ್ಜನ್ಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಒಳಗಾಗುವವರೆಂದರೆ ಸಾರ್ವಜನಿಕ ವಲಯಗಳಲ್ಲಿ ಕೆಲಸ ಮಾಡುವ ಮಹಿಳಾ ಕಂಡಕ್ಟರ್‌ಗಳು ಎಂದರೆ ತಪ್ಪಾಗಲಾರದು. ಉದ್ಯೋಗ ಸ್ಥಳದಲ್ಲಿ ಪ್ರಯಾಣಿಕರಿಂದ ಪುರುಷ ಮೇಲಾಧಿಕಾರಿಗಳಿಂದ ಮತ್ತು ಸಹೋದ್ಯೋಗಗಳಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದಾರೆ.

ಮಹಿಳಾ ಕಂಡಕ್ಟರ್‌ಗಳು ಸಂಪೂರ್ಣ ಸೋತಿರುವುದು ಆಕೆ ದಿನನಿತ್ಯ ಅನುಭವಿಸುವ ಲೈಂಗಿಕ ಕಿರುಕುಳದಲ್ಲಿ. ಹೇಳಲಾರದ ಹೇಳಬಾರದ "ಮುಸುಗಿನೊಳಗಣ ಗುದ್ದು" ಆಗಿ ಕಾಡುವ ಲೈಂಗಿಕ ನೋವುಗಳು ಅವಳಿಗೆ ಅಪಾರವಾಗಿವೆ. ಬಡತನ ನಿವಾರಣೆಗಾಗಿ ಆರ್ಥಿಕ ಸ್ವಾವಲಂಬನೆಗಾಗಿ ಹೆಣ್ಣು ಇಂದು ಹೊರಗೆ ದುಡಿಯುವುದು ಅನಿವಾರ್ಯವಾಗಿದೆ. ಅಲ್ಲೆಲ್ಲಾ ನಡೆಯುವ ಪುರುಷನ ದಬ್ಬಾಳಿಕೆಯ ಲೈಂಗಿಕ ನೋವುಗಳನ್ನು ಹೇಳಿಕೊಳ್ಳಲಾಗದ ಸ್ಥಿತಿಯಲ್ಲಿ ಮಹಿಳಾ ಕಂಡಕ್ಟರ್‌ಗಳು ಸಿಲುಕಿ ನರಳುತ್ತಿದ್ದಾರೆ.

### ೩.೫ ಪ್ರಯಾಣಿಕರಿಂದ ಲೈಂಗಿಕ ಕಿರುಕುಳ :

#### ಅ. ಅನಾವಶ್ಯಕ ದೈಹಿಕ ಸ್ಪರ್ಶ :

ಕೆಲಸದ ನೆಪದಲ್ಲಿ ಪುರುಷನು ಅನಾವಶ್ಯಕವಾಗಿ ಅಥವಾ ಉದ್ದೇಶಪೂರ್ವಕವಾಗಿ ಮಹಿಳೆಯ ದೇಹ ಸ್ಪರ್ಶ ಮಾಡುವುದು. ಬಸ್‌ನಲ್ಲಿ ತುಂಬಾ ರಶ್ ಇರುವಾಗಲಂತೂ ಇಂತಹ ಸಮಸ್ಯೆಗಳನ್ನು ಮಹಿಳಾ ಕಂಡಕ್ಟರ್‌ಗಳು ಎದುರಿಸುತ್ತಿದ್ದಾರೆ. ಜಾಗವಿದ್ದರೂ ಅಂಟಿಕೊಂಡು ನಿಲ್ಲುವುದು. ಬಸ್ ಇಳಿಯುವಾಗ ಬೇಕೂ ಅಂತಾನೇ ತಗಲಿಸುವುದು. ನಮ್ಮ ಪಕ್ಕದಲ್ಲಿ ಕೂತಾಗ ಬೇಕೂ ಅಂತಾನೇ ಕೈ ತಾಕಿಸುವುದು. ಇಲ್ಲದಿದ್ದರೆ ಸೊಂಟದ ಹತ್ತಿರ ಕೈ ಇಟ್ಟುಕೊಂಡು ಕೂತುಕೊಳ್ಳುವುದು. ಬಸ್ ತುಂಬಾ ಜನ ತುಂಬಿಕೊಂಡಾಗ ಹೆಚ್ಚು ಕಡಿಮೆ ತಗುಲಿಕೊಂಡೆ ನಡೆಯುಬೇಕಾದಾಗ ಮೈಮುಟ್ಟುವ ಚಾನ್ಸ್ ತೆಗೆದುಕೊಳ್ಳದ ಗಂಡು ಪ್ರಾಣಿ ಇಲ್ಲವೆಂದರೂ ತಪ್ಪಾಗಲಿಕ್ಕಿಲ್ಲ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

#### ಆ. ಲೈಂಗಿಕ ಒಲವಿಗಾಗಿ ಒತ್ತಾಯ ಮತ್ತು ಬೇಡಿಕೆ :

ಮಹಿಳೆಗೆ ಕಾನೂನಿನ್ವಯ ಕೊಡಬೇಕಾದ ರಜೆ. ವೇತನ, ಬಡ್ತಿ ಮುಂತಾದವುಗಳನ್ನು ಮುಂದಿಟ್ಟು ಲೈಂಗಿಕ ಒಲವನ್ನು ತೋರಿಸುವಂತೆ ಆಕೆಯನ್ನು ಒತ್ತಾಯಿಸುವುದು ಅಥವಾ ಕೇಳುವುದು. ಟಿಕೇಟು

ತೆಗೆದುಕೊಳ್ಳುವ ವಿಷಯದಲ್ಲಿ ಕೇಸ್‌ನಲ್ಲಿ ಸಿಕ್ಕಿಕೊಂಡಾಗ ಅವರ ಹತ್ತಿರ ಹೋಗುತ್ತೇವೆ. ಆಗ ಅವರು ಮಾಡಿದ ಹಾಗೇ ಮಾಡಿಸಿಕೊಂಡರೆ ಹೇಳಿದ ಹಾಗೆ ಮಾಡಿಸಿಕೊಳ್ಳದಿದ್ದರೆ ದಂಡ ಹಾಕುತ್ತಾರೆ. ಇಲ್ಲದಿದ್ದರೆ ಸುಳ್ಳು ಕಂಪ್ಲೆಂಟ್ ಮಾಡಿ ಕೆಲಸದಿಂದ ತೆಗೆಯುವ ಅವಕಾಶಗಳು ಇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದ್ದರು. ಕಂಟ್ರೋಲರ್‌ಗಳು ನಿಮಗೆ ಒಂದೇ ಕಡೆ ಕೆಲಸಕ್ಕೆ ಹಾಕುತ್ತವೆ ಎಂಬ ಆಸೆಯನ್ನು ತೋರಿಸಿ ಅವರ ಲೈಂಗಿಕ ಅಪೇಕ್ಷೆಯನ್ನು ಒಡ್ಡುತ್ತಾರೆ. ಅವರು ಹೇಳಿದ ಹಾಗೆ ಮಾಡಿದ ಹಾಗೆ ಮಾಡಿಸಿಕೊಂಡರೆ ಒಂದೇ ರೂಟ್‌ಗೆ ಹಾಕುತ್ತಾರೆ. ನಾವು ಎಷ್ಟೇ ಕಲೆಕ್ಷನ್ ತಂದರು ಏಕೆ ಇಷ್ಟು ಅಂತ ಕೇಳುವುದಿಲ್ಲ. ಸುಮ್ಮನೆ ಇರುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ಇ. ಲೈಂಗಿಕ ಚಿತ್ರಗಳ ಪ್ರದರ್ಶನ :

ಅಶ್ಲೀಲ ವಿಷಯಗಳನ್ನೊಳಗೊಂಡ ಚಿತ್ರವನ್ನು ಪ್ರದರ್ಶಿಸುವುದು. ಬಸ್‌ನಲ್ಲಿ ನಮ್ಮ ಪಕ್ಕದಲ್ಲಿ ಬೇಕು ಅಂತಾನೇ ಕೂತೂ ಅವರ ಕೈಯಲ್ಲಿ ಇರುವ ಪುಸ್ತಕದ ಮೇಲೆ ಇರುವ ಅಶ್ಲೀಲ ಚಿತ್ರಗಳನ್ನು ತೋರಿಸುತ್ತಾ ಕೂಡುವುದು. ಪೇಪರ್ ಓದುತ್ತಾ ಕುಳಿತವರು ಅಶ್ಲೀಲ ಚಿತ್ರಗಳನ್ನು ನಮಗೆ ಕಾಣುವಂತೆ ಹಿಡಿಯುವುದು. ನಾವು ಕೂಡುವ ಸ್ಥಳದಲ್ಲಿ ಹೆಣ್ಣುಮಕ್ಕಳ ಅಂಗಾಂಗಗಳನ್ನು ಬಿಡಿಸುವುದು. ನಮಗೆ ಅಲ್ಲಿ ಕೂತುಕೊಳ್ಳುವುದಕ್ಕೆ ಮುಜುಗರವಾಗುತ್ತಿರುತ್ತದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ಈ. ಲೈಂಗಿಕಾರ್ಥದ ಮಾತುಗಳು :

ಮಹಿಳೆಯ ವೇಷಭೂಷಣ ಅಥವಾ ಅಂಗಾಂಗಳ ಸಂಬಂಧ ಅಶ್ಲೀಲ ಅಥವಾ ಲೈಂಗಿಕ ಅರ್ಥ ಬರುವ ಮಾತುಗಳನ್ನಾಡುವುದು. ಟಿಕೇಟ್ ಕೇಳುವಾಗ ಆ ಊರಿಗೆ ಎಷ್ಟು ದುಡ್ಡು ಅಂತ ಕೇಳುವ ಬದಲು ದೇಹದ ಕೆಲವು ಅಂಗಾಗಗಳನ್ನು ನೋಡುತ್ತಾ ಅಲ್ಲಿಗೆ ಹೋಗಬೇಕಾದರೆ ಎಷ್ಟು ದುಡ್ಡು ಕೊಡಬೇಕು ಅಂತ ಕೇಳುತ್ತಾರೆ. ನನ್ನ ಪಕ್ಕದಲ್ಲಿಯೇ ಕೂತೂ ಇನ್ನೊಂದು ಹುಡುಗಿಯ ಅಂಗಾಂಗಗಳ ಬಗ್ಗೆ ಮಾತನಾಡುತ್ತಿರುತ್ತಾರೆ. ರಾತ್ರಿ ಕೆಲಸ ಮುಗಿಸಿ ಮನೆಗೆ ಹೋಗುವಾಗ ದಾರಿಯಲ್ಲಿ ಬರುತ್ತೀಯ ಎಷ್ಟು ರೇಟು ಅಂತ ಕೇಳುತ್ತಾರೆ. ಇಷ್ಟೊತ್ತಿನಲ್ಲಿ ಮನೆಗೆ ಹೋಗುವ ಬದಲು ಹೀಗೆ ಎಲ್ಲಿಗಾದರೂ ಹೋಗೋಣ ಬಾ ಅಂತ ತನ್ನ ಗೆಳೆಯನಿಗೆ ನೆಪ್ಪವಿಟ್ಟು ಹೇಳುವುದು. ನಾವು ಟಿಕೆಟ್ ತೆಗೆದುಕೊಳ್ಳುವುದಕ್ಕೆ ಬಸ್ ಹತ್ತುತಿರುವಾಗಲೇ ನಿಮ್ಮ ಕಂಡಕ್ಟರ್ ಬಂದಳು ನೋಡೋ ಅಂತ ವ್ಯಂಗ್ಯವಾಗಿ ಮಾತನಾಡುತ್ತಾರೆ. ಇದರಿಂದ ನಮಗೆ ಮನಸ್ಸಿಗೆ ತುಂಬಾ ನೋವಾಗುತ್ತೆ. ಆದರೆ ನಾವು ಇವನ್ನೆಲ್ಲ ಕಿವಿಯಲ್ಲಿ ಹಾಕಿಕೊಳ್ಳುವುದಿಲ್ಲ. ಇವನ್ನೆಲ್ಲಾ ಕಿವಿಯಲ್ಲಿ ಹಾಕಿಕೊಂಡರೆ ಕೆಲಸ ಮಾಡುವುದಕ್ಕೆ ಆಗುವುದಿಲ್ಲ. ಕೇಳಿಸಿಕೊಂಡರೂ ಕೇಳಿಸಿಕೊಂಡಿಲ್ಲ ಎನ್ನುವ ರೀತಿಯಲ್ಲಿ ಇದ್ದುಬಿಡುತ್ತೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

## ಉ. ಬೇರೆ ಯಾವುದೇ ವಿಧದ ಸ್ವಾಗತಾರ್ಹವಲ್ಲದ ಬಾಯಿ ಮಾತಿನ ಅಥವಾ ಬಾಯಿ ಮಾತಿನಲ್ಲದ ಲೈಂಗಿಕ ಸ್ವರೂಪದ ನಡತೆ :

ಮಹಿಳೆ ಗಮನಿಸುವಂತೆ ಅಶ್ಲೀಲಕರ ಹಾಸ್ಯ ಚಟಾಕಿಗಳಿಂದ ಮಾತನಾಡುವುದು. ಕೆಲವು ಪ್ರಯಾಣಿಕರು ಕಣ್ಣಲೇ ಸನ್ನೆ ಮಾಡಿ ಟಿಕೆಟ್ ಕೇಳುತ್ತಾರೆ. ಕಣ್ಣ ಸನ್ನೆಯಲ್ಲಿಯೇ ಬರುತ್ತೀಯ ಅಂತ ಕೇಳುತ್ತಿರುತ್ತಾರೆ. ನಾವು ಟಿಕೆಟ್ ತೆಗೆದುಕೊಳ್ಳುವುದಕ್ಕೆ ಬಸ್ ಹತ್ತಿದ ಕೂಡಲೇ ಈ ಬಸ್‌ನಲ್ಲಿ ಲೇಡಿ ಕಂಡಕ್ಟರ್ ಇದ್ದಾಳೆ. ಆ ಬಸ್‌ಗೆ ಹೋಗೋಣ ಅಂತ ಸನ್ನೇ ಮಾಡುವುದನ್ನು ನೋಡಿ ಅವರ ಹತ್ತಿರ ಟಿಕೆಟ್ ತೆಗೆದುಕೊಳ್ಳುವುದಕ್ಕೆ ಹೋಗುವುದಕ್ಕೆ ಭಯವಾಗುತ್ತೆ ಅಂತ ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

## ೩.೬ ಪ್ರಯಾಣಿಕರಿಂದ ಎದುರಿಸುವಂತಹ ಇನ್ನಿತರ ಸಮಸ್ಯೆಗಳು :

### ಅ. ಅಸಭ್ಯ ವರ್ತನೆ :

ಒಂದು ಬಸ್‌ನಲ್ಲಿ ೭೦ ಜನ ಪ್ರಯಾಣಿಕರು ಇರುತ್ತಾರೆ. ಅವರೆಲ್ಲರನ್ನು ಒಬ್ಬರೇ ನಿಭಾಯಿಸಬೇಕು ಎಂದರೆ ಎಂತಹ ಕಷ್ಟದ ವಿಷಯ. ಏಕೆಂದರೆ ಒಬ್ಬ ಪ್ರಯಾಣಿಕರ ಮನಸ್ಥಿತಿ ಒಂದೊಂದು ತರಹ ಇರುತ್ತೇ. ಕೆಲವರು ಚಿಲ್ಲರೆ ಇದ್ದರೂ ಚಿಲ್ಲರೆ ಕೊಡದೇ ಬೇಕೂ ಅಂತನೇ ಸತಾಯಿಸುವುದು. ಟಿಕೇಟ್ ಕೊಟ್ಟು ಚಿಲ್ಲರೆ ವಾಪಸ್ ಕೊಡುವುದಕ್ಕೆ ಹೋದರೆ ಬೇಡಾ ಚೆನ್ನಾಗಿದ್ದೀಯ ಇಟ್ಟುಕೋ ಎಂದು ಹೇಳುತ್ತಾರೆ. ಆದರೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಸಹಿಸಿಕೊಂಡು ಚಿಲ್ಲರೆಯನ್ನು ಅವರ ಕೈಯಲ್ಲಿ ಇಟ್ಟು ಮತ್ತೆ ಟಿಕೇಟ್ ಕೊಡುವ ಕೆಲಸದಲ್ಲಿ ನಿರತರಾಗುತ್ತೇವೆ. ಪ್ರಯಾಣಿಕರು ಏನೇ ಅಂದರೂ ಕಿವಿಗೆ ಹಾಕಿಕೊಳ್ಳದೆ ಜಾಣ ಕಿವುಡಳಂತೆ ಕೆಲಸ ಮಾಡುತ್ತೇವೆ. ಈ ರೀತಿಯ ಸಮಸ್ಯೆಗಳನ್ನು ಅನುಭವಿಸುತ್ತಲೇ ತಾಳ್ಮೆಯಿಂದ ಮಹಿಳೆ ಎನ್ನುವುದನ್ನು ಮರೆತು ಮನೆ ನಡೆಸುವ ಸಲುವಾಗಿ ದುಡಿಯಲು ಬಂದರೆ ಕ್ಷಣ ಕ್ಷಣಕ್ಕೂ ಹೆಣ್ಣು ಇರುವುದೇ ಉಪಭೋಗಕ್ಕಾಗಿ ಎನ್ನುವ ರೀತಿಯಲ್ಲಿ ವರ್ತಿಸುತ್ತಿರುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ನಾವು ಕೆಲಸಕ್ಕೆ ಸೇರಿಕೊಂಡಾಗ ನಮ್ಮ ಕಾಲ ಮೇಲೆ ನಿಂತ ಖುಷಿ ಇತ್ತು. ನೇರವಾಗಿ ಜನರೊಂದಿಗೆ ವ್ಯವಹರಿಸುವ ಬಗ್ಗೆ ಕುತೂಹಲವಿತ್ತು. ಈ ಪುರುಷ ಪ್ರಧಾನ ಸಮಾಜ ಬದಲಾವಣೆಯಾಗಿದೆ. ನಮ್ಮನ್ನು ಕೇವಲ ಕಂಡಕ್ಟರ್ ಆಗಿ ಮಾತ್ರ ಕಾಣುತ್ತಾರೆ ಎಂದೆಲ್ಲ ಅಂದುಕೊಂಡಿದ್ದೆವು. ಆದರೆ ನಮಗೆ ಒಂದೆರಡು ದಿನಗಳಲ್ಲೇ ಅದು ಭ್ರಮೆ ಎನ್ನುವ ವಾಸ್ತವ ಅರಿವಾಯಿತು ಎಂದು ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ಆ. ಟಿಕೇಟ್ ತೆಗೆದುಕೊಳ್ಳದೇ ಇರುವುದು :

ಕೆಲವು ಪ್ರಯಾಣಿಕರು ಟಿಕೇಟ್ ತೆಗೆದುಕೊಳ್ಳದೇ ನಮ್ಮನ್ನು ತೊಂದರೆಗೆ ಸಿಲುಕಿಸುತ್ತಾರೆ. ೨-೩ ಸಾರಿ ಟಿಕೇಟ್ ತೊಗೊಳ್ಳಿ ಅಂತ ಹೇಳಿದರು ತೆಗೆದುಕೊಂಡಿರುವುದಿಲ್ಲ. ಅಂತಹ ಸಮಯದಲ್ಲಿ ಚೆಕಿಂಗ್

ಆಫೀಸರ್‌ಗಳು ಬಂದರೆ ನೀವು ಬೇಕೂ ಅಂತನೇ ಟಿಕೇಟ್ ತೆಗೆದುಕೊಂಡಿಲ್ಲ ಅಂತ ಕೇಸ್ ಮಾಡಿಬಿಡುತ್ತಾರೆ. ಪ್ರಯಾಣಿಕರನ್ನು ಕೇಳಿದರೆ ಸಾರ್ ದುಡ್ಡು ಕೊಟ್ಟಿದ್ದೀನಿ ಸಾರ್ ಟಿಕೇಟ್ ಕೊಟ್ಟಿಲ್ಲ ಅಂತ ಸುಳ್ಳು ಹೇಳಿಬಿಡುತ್ತಾರೆ. ಇಲ್ಲದಿದ್ದರೆ ಅವರು ನಮ್ಮನಾ ಟಿಕೇಟ್ ಕೇಳಿಲ್ಲ ಸಾರ್ ಅಂತ ನಮ್ಮ ಮೇಲೇನೆ ತಪ್ಪು ಹೊರಿಸುತ್ತಾರೆ. ೧ ರೂಪಾಯಿಗೆ ೧೦೦ ರೂ ದಂಡ ಹಾಕುತ್ತಾರೆ. ೨೦ ರೂ ಚಾರ್ಜ್ ಇದ್ದರೆ ೨೦೦೦ ರೂ ದಂಡ ಹಾಕುತ್ತಾರೆ. ಪ್ರೊಬೆಶನರಿ ಇರುವ ಮಹಿಳಾ ಕಂಡಕ್ಟರ್‌ಗಳಿಗೆ ಸಂಬಳ ಬರುವುದೇ ೨೦೦೦ ಅದರಲ್ಲಿ ದಂಡಕ್ಕೆ ಇಷ್ಟೊಂದು ದುಡ್ಡ ಮುರಿದರೆ ನಾವು ಬದುಕುವುದು ಹೇಗೆ ಸಂಸಾರ ನಿರ್ವಹಿಸುವುದು ಕಷ್ಟವಾಗುತ್ತೆ. ಮನೆಯಲ್ಲಿ ತಂದೆ-ತಾಯಿಗಳು ನಮ್ಮ ಸಂಬಳವನ್ನೇ ನಂಬಿಕೊಂಡವರಿದ್ದಾರೆ. ಅದಕ್ಕೆ ಪ್ರಯಾಣಿಕರು ಸಹಕಾರ ಮಾಡಿದರೆ ನಾವು ಕೆಲಸ ಮಾಡಿಕೊಂಡು ಹೋಗುವುದಕ್ಕೆ ಸಹಾಯಕವಾಗುತ್ತೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ೩. ಬಸ್ ಕೆಟ್ಟು ಹೋದಾಗ :

ಒಮ್ಮೊಮ್ಮೆ ಬಸ್ ಕೆಟ್ಟು ಹೋದಾಗಲಂತೂ ಬೇರೆ ಬಸ್ ಬರುವವರೆಗೆ ಸುಮ್ನೆ ಇರುವುದೇ ಇಲ್ಲ. ಕೆಲವು ಪ್ರಯಾಣಿಕರು ಇಂತ ಬಸ್ ಯಾಕ್ ತರುತ್ತೀರಾ ಬರುವಾಗನೇ ಒಳ್ಳೆಯ ಬಸ್ ತರುವುದಕ್ಕೆ ಬರುವುದಿಲ್ಲ. ಹೊಟ್ಟೆಗೆ ಏನು ತಿನ್ನುತ್ತೀರಾ ಅಂತ ಬಾಯಿಗೆ ಸಿಕ್ಕ ಹಾಗೆ ಮಾತನಾಡುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವು ಪ್ರಯಾಣಿಕರು ಬೇರೆ ಬಸ್‌ಗೆ ಹತ್ತಿಸಿ ಕಳುಹಿಸುತ್ತೇವೆ ಎಂದರೂ ಕೇಳುವುದಿಲ್ಲ. ನಮ್ಮ ದುಡ್ಡು ನಮಗೆ ಕೊಟ್ಟುಬಿಡಮ್ಮ ಅಂತ ಒಂದೇ ಸಮನೇ ಅವಸರ ಮಾಡುತ್ತಿರುತ್ತಾರೆ. ಒಮ್ಮೊಮ್ಮೆ ನಮ್ಮ ಕೈಯಿಂದ ದುಡ್ಡು ಹಾಕಿ ಕೊಡಬೇಕಾಗುತ್ತೆ, ಅಂತ ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ಇತರೆ ಸಮಸ್ಯೆಗಳು :

ಪ್ರಯಾಣಿಕರು ಸ್ಟಾಪ್ ಇಲ್ಲದಲ್ಲಿ ಸ್ಟಾಪ್ ಕೇಳುತ್ತಾರೆ. ಬಸ್ ಸ್ಟಾಪ್ ಮಾಡದಿದ್ದರೆ ಬಸ್‌ನ ಗ್ಲಾಸ್ ಹೊಡೆದು ಹಾಕುತ್ತಾರೆ. ನಾಳೆ ಈ ರೂಟ್‌ಗೆ ಬರ್‍ರಿ ಬಸ್ ಮುಂದಕ್ಕೆ ಬಿಡುವುದಿಲ್ಲ. ಅಂತ ಎದುರಿಸುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವು ಪ್ರಯಾಣಿಕರು ಅವರು ಹೇಳಿದ ಸ್ಥಳದಲ್ಲಿ ನಿಲ್ಲಿಸದಿದ್ದದಕ್ಕಾಗಿ ಹೊಡೆಸಿಕೊಂಡಿರುವ ಸನ್ನಿವೇಶ ಹೇಳುತ್ತಾ ಕಣ್ಣಲ್ಲಿ ನೀರನ್ನು ತಂದರು. ಇನ್ನೂ ಕೆಲವು ಪ್ರಯಾಣಿಕರು ಟಿಕೇಟ್ ತೆಗೆದುಕೊಳ್ಳುವುದಿಲ್ಲ. ಮುಂದೆ ಇರುವವರು ತೆಗೆದುಕೊಳ್ಳುತ್ತಾರೆ ಎಂದು ಹೇಳುತ್ತಾರೆ. ಮುಂದಿನವರನ್ನು ಕೇಳಿದರೆ ಹಿಂದಿನವರು ತೆಗೆದುಕೊಳ್ಳುತ್ತಾರೆ ಎಂದು ಸತಾಯಿಸುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್ ಹೇಳಿದರು. ಬಸ್‌ನಲ್ಲಿ ಜಾಗವಿದ್ದರು ಮುಂದೇನೇ ನಿಂತಿರುತ್ತಾರೆ ಹಿಂದಕ್ಕೆ ಹೋಗಿ ಎಂದರೆ ಹೋಗುವುದೇ ಇಲ್ಲ. ನಾವು ಎಷ್ಟೇ ಕೂಗಿಕೊಂಡರು ನಮ್ಮ ಮಾತೇ ಕೇಳುವುದಿಲ್ಲ. ನಮ್ಮ ಮಾತೆಂದರೆ ತಾತ್ಸಾರ ಎಂದು ಹೇಳಿದರು. ಇನ್ನೂ ಕೆಲವು

ಪ್ರಯಾಣಿಕರು ಆ ಬಸ್ ಆ ಊರಿಗೆ ಹೋಗುತ್ತೆ ಅಂತ ಗೊತ್ತಿರುತ್ತೆ ಆದರೂ ಬೇಕೂ ಅಂತ ಈ ಬಸ್ ಎಲ್ಲಿಗೆ ಹೋಗುತ್ತೆ ಅಂತ ಪದೇ ಪದೇ ಕೇಳುತ್ತಿರುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವು ಪ್ರಯಾಣಿಕರು ಮತ್ತು ವಿದ್ಯಾರ್ಥಿಗಳು ಈ ಬಸ್ ಇಂತ ಊರಿಗೆ ಹೋಗುತ್ತೆ ಎಂದು ಕೂಗುವಾಗ ನಾವು ಹೇಳಿದ್ದನ್ನು ಅಣಕಿಸುವುದು ಮಾಡುತ್ತಾರೆ. ಆದರೆ ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಂಡರೆ ನಾವು ಈ ಕೆಲಸ ಮಾಡುವುದಕ್ಕೆ ಆಗುವುದಿಲ್ಲ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಹೀಗೆ ಮಹಿಳಾ ಕಂಡಕ್ಟರ್‌ಗಳಿಗೆ ಪ್ರಾಕೃತಿಕವಾಗಿ ಮತ್ತು ದೈಹಿಕವಾಗಿ ಕೆಲವು ಸಮಸ್ಯೆಗಳು ಇವೆ. ಪ್ರಾಕೃತಿಕವಾಗಿ ಪುರುಷರಿಗೆ ಇಲ್ಲದ ಕೆಲವು ಸಮಸ್ಯೆಗಳು ಇವೆ. ಪ್ರಾಕೃತಿಕ ಋತುಚಕ್ರದ ಸಂದರ್ಭದಲ್ಲಿ ಸಂತಾನೋತ್ಪತ್ತಿ ಸಮಯದಲ್ಲಿ ಅವಳು ತುಂಬಾ ಮಾನಸಿಕವಾಗಿ ಖಿನ್ನತೆಗೆ ಒಳಗಾಗುತ್ತಾರೆ. ಹೊಟ್ಟೆನೋವು, ಕೆಲಸದಲ್ಲಿ ಆಸಕ್ತಿ ಇಲ್ಲದೆ ಇರುವಂತಹದು ಸೊಂಟನೋವು, ಕೈಕಾಲು ಹರಿತಾ, ಸಂತಾನೋತ್ಪತ್ತಿ ಸಂದರ್ಭದಲ್ಲಿ ಮಕ್ಕಳ ಲಾಲನೆ-ಪಾಲನೆ ಈ ಸಮಸ್ಯೆಗಳನ್ನು ಅವಳು ಹೇಗೋ ನಿವಾರಿಸಿಕೊಳ್ಳಬಹುದು. ಆದರೆ ಪುರುಷರ ಕಡೆಯಿಂದ ಉದ್ದೇಶಪೂರ್ವಕವಾಗಿ ಬರುವ ಸಮಸ್ಯೆಗಳನ್ನು ಎದುರಿಸುವುದಕ್ಕಾಗಿಯೇ ತನ್ನ ಜಾಣ್ಮೆ ಶಕ್ತಿ, ಪ್ರತಿಭೆ, ವಿದ್ಯೆ ಸಮಯ ಎಲ್ಲವನ್ನು ಶೇ. ೩೦-೪೦ ಭಾಗವನ್ನು ಪುರುಷರಿಂದ ಉಂಟಾಗುತ್ತಿರುವ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಹೋರಾಡಬೇಕಾಗಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ನೊಂದು ಹೇಳಿದರು.

### ೩.೭ ಸಹೋದ್ಯೋಗಿಗಳಿಂದ ಎದುರಿಸವಂತಹ ಸಮಸ್ಯೆಗಳು :

### ಅ. ಸಹೋದ್ಯೋಗಿಗಳಿಂದ ಲೈಂಗಿಕ ಕಿರುಕುಳ :

ಕೆಲವು ಮಹಿಳಾ ಕಂಡಕ್ಟರ್‌ಗಳು ಪುರುಷ ಸಹೋದ್ಯೋಗಿಗಳ ಬಗೆಗೆ ಅಸಮಾಧಾನ ವ್ಯಕ್ತಪಡಿಸಿದರು. ಪುರುಷರು ನಮ್ಮ ಜೊತೆಗೆ ಕೆಲಸ ಮಾಡುವ ಮಹಿಳೆಯನ್ನು ಸಹೋದ್ಯೋಗಿಯೆಂದು ಕಾಣದೆ 'ಹೆಣ್ಣು' ಎಂದೆ ಕಾಣುತ್ತಾರೆ. ಅವರು ನಮ್ಮ ಜೊತೆಗೆ ಗಂಭೀರವಾಗಿ ನಡೆದುಕೊಳ್ಳುವುದಿಲ್ಲ, ಗೌರವ ಕೊಡುವುದಿಲ್ಲ ಎಂದು ಹೇಳುತ್ತಾರೆ. ಕೆಲಸದ ಸ್ಥಳದಲ್ಲಿ ವಾತಾವರಣ ಸರಿಯಾಗಿದ್ದರೆ, ಸಹೋದ್ಯೋಗಿಗಳ ಸಹಕಾರ ಇದ್ದರೆ ಮಾತ್ರ ಕೆಲಸ ಮಾಡುವುದಕ್ಕೆ ಸಾಧ್ಯವಾಗುತ್ತೆ. ಆದರೆ ಕೆಲವು ಸಹೋದ್ಯೋಗಿಗಳ ನಮ್ಮನ್ನ ನೋಡುವ ದೃಷ್ಟಿಯೇ ಬೇರೆ. ನಾವು ಅವರನ್ನು ಅಣ್ಣ, ಅಪ್ಪ ಅಂತ ಮಾತನಾಡಿಸಿದರು ಅವರು ನಮ್ಮನ್ನ ಒಂದು ಹೆಣ್ಣಾಗಿ ನೋಡುತ್ತಾರೆ ಹೊರತು ತಂಗಿ, ಮಗಳಾಗಿ ಕಾಣುವುದೇ ಇಲ್ಲ. ಒಬ್ಬರೇ ಸಿಗುವಂತಹ ಸಮಯವನ್ನು ಹುಡುಕುತ್ತಿರುತ್ತಾರೆ. ಇಂತಹ ಅವಕಾಶ ಸಿಗುವುದು ಬಸ್ ಕೆಟ್ಟು ಹೋಗಿರುವಂತಹ ಸಮಯದಲ್ಲಿ ನಾವು ಇಬ್ಬರೆ ಇರುತ್ತೇವೆ. ಅಂತಹ ಸಮಯದಲ್ಲಿ ನಮ್ಮನ್ನ ತಮ್ಮ ಆಸೆಯನ್ನು ತೀರಿಸಿಕೊಳ್ಳಲು ಒತ್ತಾಯಿಸುತ್ತಿರುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಇನ್ನೂ ಕೆಲವು ಸಹೋದ್ಯೋಗಿಗಳು ಏಕವಚನದಲ್ಲಿ ಮಾತನಾಡಿಸುತ್ತಾರೆ. ಏನೆ ಬಾರೆ ಅಂತ ಮಾತನಾಡಿಸುತ್ತಾರೆ. ಗೌರವವನ್ನೇ ಕೊಡುವುದಿಲ್ಲ ಅಂತ ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ನಮ್ಮ ಜೊತೆ ಚೆನ್ನಾಗಿ ಮಾತಾಡಿ ನಾವು ಮುಂದೆ ಹೋದಾಗ ಅವಳು ಇವಳು ಅಂತ ಮಾತಾಡುತ್ತಿರುತ್ತಾರೆ. ಅದನ್ನು ಕೇಳಿಸಿಕೊಂಡು ತುಂಬಾ ಬೇಸರವಾಗುತ್ತೆ. ಮೈಕೈಮುಟ್ಟಿ ಮಾತಾಡಿಸುತ್ತಿರುತ್ತಾರೆ. ಊಟಕ್ಕೆ ಕುಳಿತಾಗ ಕಣ್ಣಸನ್ನೇ ಮಾಡುವುದು. ನಮ್ಮ ಅಂಗಾಂಗಗಳ ಬಗ್ಗೆ ಮಾತಾಡುತ್ತಿರುತ್ತಾರೆ. ಆವಾಗಲಂತೂ ತುಂಬಾ ಮುಜುಗರವಾಗುತ್ತೆ ಅಂತ ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ಆ. ಸಹೋದ್ಯೋಗಿಗಳಿಂದ ಇತರೆ ತೊಂದರೆಗಳು :

ವಿವಾಹಿತ ಸ್ತ್ರೀಯರನ್ನು ಕಂಡರೆ ತಾತ್ಸಾರ ಮಾಡುತ್ತಾರೆ. ಸರಿಯಾಗಿ ಮಾತನಾಡಿಸುವುದಿಲ್ಲ. ಡ್ರೈವರ್‌ಗಳು ವಿವಾಹಿತ ಮಹಿಳಾ ಕಂಡಕ್ಟರ್‌ಗಳನ್ನು ಅವರ ಜೊತೆ ಡ್ಯೂಟಿಗೆ ಹಾಕಿಸಿಕೊಳ್ಳುವುದಿಲ್ಲ. ಆಯಮ್ಮ ಬೇಡ ಸಾರ್ ಆಯಮ್ಮ ಸರಿಯಾಗಿಲ್ಲ. ಬೇಗ ಬೇಗ ಟಿಕೇಟ್ ತೆಗೆದುಕೊಳ್ಳುವುದಿಲ್ಲ. ಗಂಟೆಗಟ್ಟಲೆ ಬಸ್ ನಿಲ್ಲಿಸಿಬಿಡುತ್ತಾಳೆ ಎಂಬ ಆಪಾದನೆಗಳನ್ನು ಸೃಷ್ಟಿಸುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಡ್ರೈವರ್‌ಗಳಿಗೆ ನಮ್ಮ ದುಡ್ಡಿನಲ್ಲಿಯೇ ಅವರಿಗೆ ಊಟ-ತಿಂಡಿ ಕೊಡಿಸಬೇಕು. ಇದಕ್ಕೆಲ್ಲ ದುಡ್ಡನ್ನು ಎಲ್ಲಿಂದ ತರಬೇಕು. ಅದಕ್ಕೆ ನಾವು ಟಿಕೇಟ್ ಕೊಡುವಾಗ ಒಬ್ಬರಿಗೆ ಅಥವಾ ಇಬ್ಬರಿಗೂ ಟಿಕೇಟ್ ಕೊಡದೆ ಊಟ ಮಾಡಿಸಬೇಕು. ಅಂತ ಸಮಯದಲ್ಲಿ ಚೆಕಿಂಗ್ ಆಫೀಸರ್ ಬಂದರಂತೂ ಬೇಕೂ ಅಂತ ದುಡ್ಡನ್ನು ಮಾಡುವುದಕ್ಕೆ ಈ ರೀತಿಯಾಗಿ ಮಾಡುತ್ತೀರಾ ಅಂತ ಕೇಸ್ ಮಾಡುತ್ತಾರೆ. ಡ್ರೈವರ್‌ಗಳಿಗೆ ಊಟ-ತಿಂಡಿ ಕೊಡಿಸದಿದ್ದರೆ ನಮ್ಮ ಕೆಲಸಕ್ಕೆ ಸಹಕಾರ ಮಾಡುವುದಿಲ್ಲ ಸಾರ್ವಜನಿಕರು ನಮ್ಮ ಮೇಲೆ ಜಗಳಕ್ಕೆ ಬಂದರೆ ನಮ್ಮ ಸಹಾಯಕ್ಕೆ ಬರುವುದಿಲ್ಲ ಅಂತ ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಸಾವಿರ ರೂಪಾಯಿ ಕಲೆಕ್ಷನ್ ಆಯಿತೆಂದರೆ ಅದಕ್ಕೆ ಡ್ರೈವರ್‌ಗಳಿಗೆ ೧೯ ರೂಪಾಯಿ ಇನ್ಸೆಂಟಿವ್ ಸಿಗುತ್ತದೆ. ಸಾವಿರಕ್ಕೂ ಹೆಚ್ಚು ಕಲೆಕ್ಷನ್ ಆಗದಿದ್ದರೂ ಇನ್ಸೆಂಟಿವ್ ಕೇಳುತ್ತಾರೆ.

### ಉ. ಮೇಲಾಧಿಕಾರಿಗಳಿಂದ ಎದುರಿಸುವಂತಹ ತೊಂದರೆಗಳು :

ಮಹಿಳಾ ಕಂಡಕ್ಟರ್‌ಗಳು ಕೆ.ಎಸ್.ಆರ್.ಟಿ.ಸಿ. ಅಧಿಕಾರಿಗಳ ಬಗ್ಗೆ ತುಂಬಾ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ದಿನಕ್ಕೆ ಇಂತಿಷ್ಟು ಕಿ.ಮೀ ಮಾಡಬೇಕು ಅಂತ ನಿಯಮ ಇರುತ್ತೆ. ಆ ನಿಯಮದ ಪ್ರಕಾರ ಡ್ಯೂಟಿ ಮಾಡಿದರು ಸರಿಯಾದ ಸಮಯಕ್ಕೆ ಬಿಡುವುದಿಲ್ಲ. ಇನ್ನೊಂದು ಟ್ರಿಪ್ ಹೋಗು ಅಂತಾರೆ. ಹೋಗಿ ಬರುವಷ್ಟರಲ್ಲಿ ರಾತ್ರಿ ೯-೧೦ ಗಂಟೆಯಾಗುತ್ತೆ. ಅಕಸ್ಮಾತ್ ಅರ್ಧ ದಾರಿಯಲ್ಲಿ ಬಸ್ ಕೆಟ್ಟು ಹೋದರೆ ಮನೆಗೆ ಬರುವುದಕ್ಕೆ ೧-೨ ಗಂಟೆಯಾಗುತ್ತೆ. ಮನೆಯಲ್ಲಿ ಮಕ್ಕಳ ಗತಿ ಏನು? ನಮಗೆ ಅಲ್ಲಿ ಊಟ ಸಹ ಸಿಗುವುದಿಲ್ಲ. ಡ್ರೈವರ್‌ಗಳು ಒಳ್ಳೆಯವರಾಗಿದ್ದರೆ ಪರವಾಗಿಲ್ಲ. ಅಕಸ್ಮಾತ್ ಅಲ್ಲಿ ನಾವಿಬ್ಬರೆ ಇರುತ್ತೇವೆ. ಏನಾದರೂ ಹೆಚ್ಚು ಕಡಿಮೆಯಾದರೆ ನಮ್ಮ ಜೀವನ ಹಾಳಾಗುತ್ತದೆ.

ಇದನ್ನೆಲ್ಲಾ ಮೇಲಾಧಿಕಾರಿಗಳು ಯೋಚನೆ ಮಾಡಲ್ಲವೆಂದು ತುಂಬಾ ನೊಂದುಕೊಂಡು ತಮ್ಮ ಕಹಿನೆನಪುಗಳನ್ನು ಹೇಳಿಕೊಂಡರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಮ್ಯಾನೇಜರ್‌ಗಳಿಗೆ ದುಡ್ಡು ಮುಖ್ಯವೇ ಹೊರತು ಕೆಲಸಗಾರರಲ್ಲ. ರಕ್ಷಣೆ ನೀಡುವವರೇ ನಮ್ಮ ಬಗ್ಗೆ ಕಾಳಜಿ ವಹಿಸುವುದಿಲ್ಲ. ಅಂದರೆ ಕೆಲಸ ಮಾಡುವುದಕ್ಕೆ ಕಷ್ಟವಾಗುತ್ತೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಕಂಟ್ರೋಲರ್‌ಗಳು ಹಾಕಿಕೊಟ್ಟಷ್ಟು ಕಲೆಕ್ಷನ್ ತರಲಿಲ್ಲ ಅಂದರೆ ಬೈಯುತ್ತಾರೆ. ನಾವೇನಾದರೂ ಸ್ವಲ್ಪ ಎದುರು ಮಾತಾಡಿ ಹೋಗುವುದಕ್ಕೆ ಆಗುವುದಿಲ್ಲ ಸಾರ್ ಎಂದರೆ ಅವಾಚ್ಯ ಶಬ್ದಗಳಿಂದ ಮಾತನಾಡುತ್ತಾರೆ. ಈ ಮಾತುಗಳನ್ನು ನೆನೆಸಿಕೊಂಡು ಊಟ ಮಾಡುವುದಕ್ಕೆ ಆಗುವುದಿಲ್ಲ. ಮಲಗಿದರೆ ಸ್ವಲ್ಪ ಹೊತ್ತು ನಿದ್ದೇನೆ ಬರುವುದಿಲ್ಲ. ಅಳು ಬರುತ್ತಿರುತ್ತೆ ಇಷ್ಟೆಲ್ಲಾ ಕೂಗಿಕೂಗಿ ಪ್ರಯಾಣಿಕರನ್ನು ಹತ್ತಿಸಿಕೊಂಡು ಬಂದು ಇಷ್ಟೊಂದು ಕಲೆಕ್ಷನ್ ತಂದರೂ ಇವರ ಹತ್ತಿರ ಅನ್ನಿಸಿಕೊಳ್ಳಬೇಕಲ್ಲ ಅಂತ ಮನಸ್ಸಿಗೆ ನೋವಾಗುತ್ತೆ, ಎಷ್ಟು ಮಾಡಿದರೂ ಇಷ್ಟೇ ಅಂತ ಅನ್ನಿಸಿಬಿಟ್ಟಿದೆ. ಕೆಲಸದಲ್ಲಿ ಆಸಕ್ತಿಯೇ ಹೊರಟು ಹೋಗಿದೆ. ಆದರೆ ಏನು ಮಾಡುವುದು ಮನೆಯ ಪರಿಸ್ಥಿತಿ ನೋಡಿ ಮಕ್ಕಳ ಭವಿಷ್ಯಕ್ಕಾಗಿ ಅವರು ಏನೇ ಅಂದರೂ ಅನ್ನಿಸಿಕೊಂಡು ಕೆಲಸ ಮಾಡುತ್ತಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

### ೩.೮ ಮಾನಸಿಕ ಸಮಸ್ಯೆಗಳು :

ನಮ್ಮ ಜೀವನೋಪಾಯಕ್ಕಾಗಿ ನಾವೆಲ್ಲ ಒಂದು ಉದ್ಯೋಗ ಮಾಡಲೇಬೇಕು. ನಮ್ಮ ದೇಹ, ಮನಸ್ಸಿನ ಶಕ್ತಿ-ಸಾಮರ್ಥ್ಯಗಳು ಸದುಪಯೋಗವಾಗಲು ಒಂದು ಉದ್ಯೋಗ ಬೇಕೆಬೇಕು. ಸ್ತ್ರೀಯಾಗಲಿ, ಪುರುಷನಾಗಲಿ ಉದ್ಯೋಗ ಮಾಡುವುದು ಇಂದಿನ ಕಾಲದಲ್ಲಿ ಅಗತ್ಯ. ಆದರೆ ತುಂಬಾ ಜನಕ್ಕೆ ಇಷ್ಟಪಡುವ ಉದ್ಯೋಗ ಸಿಗುವುದಿಲ್ಲ. ಇದೇ ರೀತಿ ಮಹಿಳಾ ಕಂಡಕ್ಟರ್‌ಗಳು ತಮಗೆ ಸಿಕ್ಕ ಈ ಉದ್ಯೋಗವನ್ನು ಅನಿವಾರ್ಯವಾಗಿ ಒಪ್ಪಿಕೊಂಡು ನಮ್ಮ ದುರದೃಷ್ಟಕರ ದಿನಕ್ಕೆ ೧೪-೧೫ ತಾಸುಗಿಂತಲು ಹೆಚ್ಚಿನ ಸಮಯ ಇರಬೇಕಾದಂತಹ ಉದ್ಯೋಗ ಸ್ಥಳ. ಅವಿವಾಹಿತ ವಾತಾವರಣ ಸಹೋದ್ಯೋಗಿಗಳು, ಮೇಲಾಧಿಕಾರಿಗಳು, ಉದ್ಯೋಗದ ಜವಾಬ್ದಾರಿ, ಬಡ್ತಿ, ವರ್ಗಾವಣೆ ಸಮಸ್ಯೆ, ಪ್ರಯಾಣಿಕರ ಅಸಭ್ಯವರ್ತನೆ ಇವೆಲ್ಲ ಸಮಸ್ಯೆಗಳು ಅವರ ಮನಸ್ಸನ್ನು ಹೈರಾಣ ಮಾಡುವ ಸಂಗತಿಗಳು. ಒಂದಾದರೆ ಇನ್ನೊಂದು ಸಂಗತಿ ಕುಟುಂಬದಲ್ಲಿ ಮಹಿಳಾ ಕಂಡಕ್ಟರ್‌ಗಳು ಹಲವು ರೀತಿಯ ನೋವು ನಿರಾಶೆ ಕಷ್ಟಗಳಿಗೆ ಒಳಗಾಗಿದ್ದಾರೆ. ಗಂಡ-ಹೆಂಡಿರ ಮನಸ್ತಾಪ ಅತ್ತೆ-ಸೊಸೆಯರ ಜಗಳ, ತಂದೆ-ತಾಯಿ-ಮಕ್ಕಳ ನಡುವೆ ಭಿನ್ನಾಭಿಪ್ರಾಯ, ಕುಟುಂಬದ ಸದಸ್ಯರ ವಿರಸ, ಉದ್ಯೋಗ ಮಾಡುವ ವಾತಾವರಣಕ್ಕೆ ಸಂಬಂಧಿಸಿದಂತೆ ಮೇಲಾಧಿಕಾರಿಗಳ ಕೋಪ, ಲೈಂಗಿಕ ಹಿಂಸೆ, ಸಹೋದ್ಯೋಗಿಗಳ ಅಸಹನೆ, ಪ್ರಯಾಣಿಕರ ಅಸಭ್ಯವರ್ತನೆ, ಮನೆಯಲ್ಲಿ ಗಂಡನ ಬೈಗುಳ, ಹೊಡೆತದಿಂದ ಮಹಿಳಾ ಕಂಡಕ್ಟರ್‌ಗಳು ಮನೋ ಖಿನ್ನತೆಗೆ ಮತ್ತು ದೈಹಿಕ ವ್ಯಾಕುಲತೆಗೆ ಒಳಗಾಗಿದ್ದಾರೆ.

## ಅ. ತಂದೆ-ತಾಯಿ ಮಕ್ಕಳ ನಡುವೆ ಭಿನ್ನಾಭಿಪ್ರಾಯ :

ಕೆಲವು ಮಹಿಳಾ ಕಂಡಕ್ಟರ್‌ಗಳು ಮನೆಯಲ್ಲಿ ಬೇಡ ಅಂದರೂ ಈ ಕೆಲಸಕ್ಕೆ ಬಂದವರು ಇದ್ದಾರೆ. ನಮ್ಮದು ಸಂಪ್ರದಾಯಸ್ಥ ಕುಟುಂಬ ಹೆಣ್ಣುಮಕ್ಕಳು ಇಂತ ಕೆಲಸಗಳನ್ನು ಮಾಡಬಾರದು. ನಮ್ಮ ಮನೆತನಕ್ಕೆ ಅವಮಾನ ಎಂದು ಹೇಳಿದರು. ಆದರೂ ನಾನು ನಮ್ಮ ಕಾಲಮೇಲೆ ನಿಂತುಕೊಳ್ಳಬೇಕು ಎಂಬ ಕಾರಣಕ್ಕಾಗಿ ಈ ಕೆಲಸಕ್ಕೆ ಬಂದಿದ್ದೇವೆ. ಅದಕ್ಕಾಗಿ ನನ್ನ ತಂದೆ-ತಾಯಿ ನನ್ನನ್ನು ನೋಡುವುದಕ್ಕಾಗಲಿ, ಮಾತನಾಡಿಸುವುದಕ್ಕಾಗಿ ಬರುವುದಿಲ್ಲ. ನಮಗೆ ಆರೋಗ್ಯ ಸರಿ ಇಲ್ಲದಿದ್ದಾಗ ನಮ್ಮ ತಂದೆ-ತಾಯಿಗಳು ನೆನಪಿಗೆ ಬರುತ್ತಾರೆ. ನಮ್ಮನ್ನು ಬೆಳೆಸಿದವರು ಅವರು. ಅವರಿಂದ ಮಾರ್ಗದರ್ಶನಗಳಿಲ್ಲದೆ ನಮಗೆ ಅನಾಥಪ್ರಜ್ಞೆ ಕಾಡುತ್ತಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

## ಆ. ಗಂಡ-ಹೆಂಡತಿಯರ ಮನಸ್ತಾಪ :

ಕಂಡಕ್ಟರ್ ಉದ್ಯೋಗ ಅಂದರೇನೆ ಸಾರ್ವಜನಿಕರ ಮಧ್ಯೆ ಕೆಲಸ ಮಾಡಬೇಕಾದಂತಹುದೋ ದಿನದಲ್ಲಿ ೧೩-೧೪ ತಾಸು ಕೆಲಸದಲ್ಲಿಯೇ ಸಾರ್ವಜನಿಕರ ಮಧ್ಯನೇ, ಸಾರ್ವಜನಿಕರ ಒಡನಾಟದಲ್ಲಿ ಇರುವಂತಹದು. ಜನರನ್ನು ಮಾತನಾಡಿಸಬೇಕಾಗುತ್ತದೆ. ಸಹೋದ್ಯೋಗಿಗಳ ಜೊತೆ ಸಹಜವಾಗಿ ಇರಲೇಬೇಕು. ಅದನ್ನು ನೋಡಿ ಅವರಿಗೂ ನಿನಗೂ ಏನು ಸಂಬಂಧ ಅವರ ಹತ್ತಿರ ಏಕೆ ಮಾತನಾಡುತ್ತೀಯ. ಇವರ ಹತ್ತಿರ ಏಕೆ ಮಾತನಾಡುತ್ತೀಯ ಅಂತ ಮನೆಗೆ ಬಂದಾಗ ಒಮ್ಮೊಮ್ಮೆ ಕೆಲಸದ ಸ್ಥಳದಲ್ಲಿಯೇ ಜಗಳ ಮಾಡುವುದಕ್ಕೆ ಮತ್ತು ಹೊಡೆಸಿಕೊಂಡಿರುವ ಸನ್ನಿವೇಶ ನೆನಸಿಕೊಂಡು ಕೆಲವರು ಕಣ್ಣಲ್ಲಿ ನೀರು ತುಂಬಿ ಹೇಳಿದರು. ಇನ್ನೊಬ್ಬರನ್ನು ಮಾತನಾಡಿಸುವುದಕ್ಕಾಗಿಯೇ ನಮ್ಮಿಬ್ಬರ ಸಂಬಂಧ ವಿಚ್ಛೇದನೆವರೆಗೂ ಹೋಗಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಮನೆಗೆ ಬೇಗ ಹೋಗಬೇಕು ಎಂದು ಡ್ಯೂಟಿ ಮುಗಿಸಿಕೊಂಡು ಬಂದರೆ ಮ್ಯಾನೇಜರ್ ಇನ್ನೊಂದು ಟ್ರಿಪ್ ಹೋಗು ಅಂತ ಹೇಳುತ್ತಾರೆ. ಇನ್ನೊಂದು ಟ್ರಿಪ್ ಹೋಗಿ ಬರುವಷ್ಟರಲ್ಲಿ ರಾತ್ರಿ ತುಂಬಾ ತಡವಾಗುತ್ತದೆ. ಮನೆಯಲ್ಲಿ ಜಗಳ ಮಾಡುತ್ತಾರೆ. ಮನೆಗೆ ದಿನಾಲು ತಡವಾಗಿ ಬಂದರೆ ಮಕ್ಕಳ ಗತಿಯೇನು? ಮನೆಯಲ್ಲಿ ವಯಸ್ಸಾದ ತಂದೆ-ತಾಯಿಯನ್ನು ನೋಡಿಕೊಳ್ಳುವವರು ಯಾರು ಎಂದು ಬೈಯುತ್ತಾರೆ. ಒಮ್ಮೊಮ್ಮೆ ಹೊಡೆತ ತಿಂದಿದ್ದೇನೆ ಎಂದು ಕೆಲವು ಕಂಡಕ್ಟರ್‌ಗಳು ಹೇಳಿದರು. ಮನೆಗೆ ತಡವಾಗಿ ಬಂದರೆ ಯಾರ ಜೊತೆ ಹೋಗಿದ್ದೆ. ಇಷ್ಟೊತ್ತು ಯಾರ ಜೊತೆ ಮಲಗಿದೆ ಅಂತ ಅವಾಚ್ಯ ಶಬ್ದಗಳಿಂದ ಬೈಯಿಸಿಕೊಳ್ಳಬೇಕು ಎಂದು ಹೇಳಿದರು. ಇನ್ನು ಕೆಲವು ಮಹಿಳಾ ಕಂಡಕ್ಟರ್‌ಗಳ ಗಂಡಂದಿರು ಬೇರೆ ಊರಿಲ್ಲಿ ಕೆಲಸ ಮಾಡುತ್ತಿರುವವರ ಪಾಡಂತೂ ಬೇಡವೇಬೇಡ. ಇಬ್ಬರಿಗೂ ಹೊಂದಾಣಿಕೆ ಮಾಡಿಕೊಳ್ಳುವುದಕ್ಕೆ ಸಮಸ್ಯೆ ಉಂಟಾಗುತ್ತವೆ. ಇಬ್ಬರಲ್ಲಿ ಒಬ್ಬರಾದರೂ ಒಂದು ಕಡೆ ಬರುವುದಕ್ಕೆ ಆಗುತ್ತಿಲ್ಲ. ಹೆಂಡತಿಯಾದ ನೀನೆ ನನ್ನ ಊರಿಗೆ ವರ್ಗಾವಣೆ ಮಾಡಿಸಿಕೋ ಅಂತ ಹೇಳುತ್ತಾರೆ. ಆದರೆ ನನಗೆ ಇಲ್ಲಿ ವರ್ಗಾವಣೆ

ಕೊಡುವುದಕ್ಕೆ ತಡ ಮಾಡುತ್ತಿದ್ದಾರೆ. ಅದಕ್ಕೆ ಅವರು ನೀನು ಬೇಕೂ ಅಂತನೇ ವರ್ಗಾವಣೆ ಮಾಡಿಸಿಕೊಳ್ಳುತ್ತಿಲ್ಲ ಅಂತ ಜಗಳ ಮಾಡುತ್ತಾರೆ. ಈ ಒಂದು ಕಾರಣದಿಂದಲೂ ನಮ್ಮಿಬ್ಬರ ನಡುವೆ ಮನಸ್ತಾಪ ಉಂಟಾಗಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಗಂಡ ತನ್ನ ದುಡಿತದ ಹಣದಲ್ಲಿ ಸ್ವಲ್ಪ ಹಣವನ್ನು ತನ್ನ ತಂದೆ-ತಾಯಿಗೆ ನನ್ನನ್ನು ಕೇಳದೆ ಕೊಟ್ಟು ಕಳುಹಿಸುತ್ತಾರೆ. ಆದರೆ ನಾನು ನನ್ನ ಸಂಬಳದಲ್ಲಿ ಒಂದಿಷ್ಟು ಹಣವನ್ನು ತಂದೆ-ತಾಯಿಗೆ ಕಳುಹಿಸಬೇಕೆನಿಸಿದರೂ ಅವರ ಅನುಮತಿ ಕೇಳಬೇಕು. ಹಾಗೇ ಕಳುಹಿಸಿದರೆ ಜಗಳ ಮಾಡುತ್ತಾರೆ. ಅವರು ಕಳುಹಿಸು ಅಂದರೆ ಕಳುಹಿಸಬೇಕು. ಕಳುಹಿಸಬೇಡ ಅಂದರೆ ಕಳುಹಿಸಬಾರದು. ಆದರೂ ಅನಿವಾರ್ಯವಾಗಿ ತಂದೆ-ಮನೆಯಲ್ಲಿ ಬಡತನ ಇರುವುದರಿಂದ ಮತ್ತು ಮನೆಯಲ್ಲಿ ತಂಗಿ ತಮ್ಮ ಓದುತ್ತಿದ್ದಾರೆ. ಅವರಿಗೆ ಸಹಾಯವಾಗಲಿ ಎಂದು ಕಳುಹಿಸಿದರೆ ಜಗಳ ಮಾಡುತ್ತಾರೆ. ಅದರಿಂದ ಮನಸ್ಸಿಗೆ ತುಂಬಾ ನೋವಾಗುತ್ತೆ. ಏಕೆಂದರೆ ತಂದೆ-ತಾಯಿಗಳು ನಮಗೆ ಸಾಲ ಮಾಡಿ ಓದಿಸಿರುತ್ತಾರೆ. ಅಲ್ಪ ಸ್ವಲ್ಪಾನು ಸಹಾಯ ಮಾಡದಿದ್ದರೆ ನೋವಾಗುತ್ತೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ತಮ್ಮ ಮನದ ಮಾತನ್ನು ಹೇಳಿಕೊಂಡರು.

### ೩. ಅತ್ತೆ-ಸೊಸೆ ಜಗಳ :

ಕುಟುಂಬದಲ್ಲಿ ಅತ್ತೆ-ಸೊಸೆ ಸಂಬಂಧಕ್ಕೆ ಒಂದು ಪರಂಪರೆ ಇದೆ. ಅತ್ತೆ-ಸೊಸೆಯ ನಡುವೆ ಅಂತಸ್ತಿನ ಅಗಾಧ ಅಂತರವಿದ್ದು, ಸೊಸೆಯು ಅತ್ತೆಗೆ ಅಪಾರ ಗೌರವವನ್ನು ತೋರಿಸಬೇಕು. ಅತ್ತೆಯೊಂದಿಗೆ ಭಯ ವಿನಯದೊಂದಿಗೆ ವರ್ತಿಸಬೇಕು. ಇದಕ್ಕೆ ಪ್ರತಿಯಾಗಿ ಅತ್ತೆಯ ಸೊಸೆಯ ಮೇಲೆ ಅಧಿಕಾರವನ್ನು ಚಲಾಯಿಸಬಹುದು. ಸೊಸೆಯ ವೈಯಕ್ತಿಕ ವಿಷಯಗಳಲ್ಲಿಯೂ ಅತ್ತೆಯ ತೀರ್ಮಾನಗಳನ್ನು ಕೈಗೊಳ್ಳುತ್ತಾಳೆ. ಅತ್ತೆಯು-ಸೊಸೆಯ ಮಟ್ಟಿಗೆ ಸರ್ವಾಧಿಕಾರಿಣಿಯ ಸ್ವರೂಪದಲ್ಲಿ ಕಾಣಸಿಕೊಂಡಿರುತ್ತಾಳೆ. ಅದೇ ರೀತಿಯಾಗಿ ಸೊಸೆಯಂದಿರು ಸಂಪೂರ್ಣವಾಗಿ ಅತ್ತೆಯ ಅಧೀನದಲ್ಲಿ ಅಂಜಿ ಜೀವಿಸಬೇಕಾಗುತ್ತದೆ. ಆದರೆ ಇಂದು ಅತ್ತೆ-ಸೊಸೆಯ ನಡುವಿನ ಸಂಬಂಧದಲ್ಲಿ ಸ್ವಲ್ಪ ವ್ಯತ್ಯಾಸವೂ ಕಂಡುಬರುತ್ತಿದೆ. ಇವರ ನಡುವೆ ಮೊದಲು ಇದ್ದ ಅತಿಯಾದ ಅಧಿಕಾರ ಅಧೀನತೆಯ ಅಂತರ ಕಡಿಮೆಯಾಗಿ ಸಾಕಷ್ಟು ಸಡಿಲತೆ ಹಾಗೂ ಸೊಸೆಯ ಮೊದಲಿನಂತೆ ತೀರ ವಿಧೇಯರಾಗಿ ಇಲ್ಲದೆ ಇರುವ ಪರಿಸ್ಥಿತಿಯೂ ತಲೆದೋರುತ್ತಿದೆ. ಅದಾಗ್ಯೂ ಈ ಪುರುಷ ಪ್ರಧಾನ ಕುಟುಂಬದಲ್ಲಿ ಇಂದಿಗೂ ಅತ್ತೆ-ಸೊಸೆಯ ಮೇಲೆ ಸಾಕಷ್ಟು ಅಧಿಕಾರ ಹಿಡಿತವನ್ನು ಹೊಂದಿರುವುದು ಕಂಡುಬರುತ್ತಿದೆ. ಈ ರೀತಿ ಮೊದಲಿನಿಂದಲೂ ನಡೆದುಕೊಂಡು ಬಂದಿರುವುದರಿಂದ ಹೊರಗಡೆ ಕೆಲಸ ಮಾಡುವ ನಮ್ಮಂತವರ ಪಾಡಂತೂ ಬೇಡವೇ ಬೇಡ. ಮನೆಯಲ್ಲಿ ಇದ್ದು ಎಲ್ಲಾ ಕೆಲಸ ಮಾಡಿದರೂ ಅತ್ತೆಯಿಂದ ಅದು ಮಾಡಿಲ್ಲ. ಇದು ಮಾಡಿಲ್ಲ ಅಂಥ ಯಾವಾಗಲೂ ಗೊಣಗುತ್ತಾರೆ. ಅಂತದರಲ್ಲಿ ನಮ್ಮಂತವರು ದಿನದ ೧೩-೧೪ ತಾಸು ಕೆಲಸದಲ್ಲಿಯೇ ಇರಬೇಕಾಗಿರುವುದರಿಂದ ಕೆಲಸದ ಸ್ಥಳದಲ್ಲಿ, ಮೇಲಾಧಿಕಾರಿಗಳ ಹತ್ತಿರ ಇತ್ಯಾದಿಗಳಲ್ಲೆಲ್ಲ ಕೆಲಸ ಮಾಡಿ ಸುಸ್ತಾಗಿ ಬಂದಿರುತ್ತೇವೆ. ಅಂತಹದಲ್ಲಿ ಮನೆಯಲ್ಲಿ ಸಹ ಬಂದು ಕೆಲಸ ಮಾಡಬೇಕು. ಯಾವಾಗಲಾದರೂ ಒಮ್ಮೆ ಸುಸ್ತಾಗಿದ್ದಕ್ಕಾಗಿ

ಮನೆಕೆಲಸ ಮಾಡದೇ ಹಾಗೇ ಮಲಗಿಬಿಟ್ಟರೆ ಅತ್ತೆ-ಮಾವ, ಗಂಡನಿಂದ ಬೈಯಿಸಿಕೊಳ್ಳಬೇಕು. ನಿನಗೆ ಹೇಳೋರು ಕೇಳೋರು ಯಾರು ಇಲ್ಲವಾ ಮನೆಗೆ ಎಷ್ಟೊತ್ತಿಗೆ ಬೇಕೋ ಅಷ್ಟೊತ್ತಿಗೆ ಬರುವುದಲ್ಲದೆ, ಅಡಿಗೆ ಮಾಡದೆ ಹಾಗೆ ಮಲಗಿದರೆ ಈ ಕೆಲಸ ಮಾಡುವವರ್‍ಯಾರು ಅಂತ ಬಾಯಿಗೆ ಸಿಕ್ಕ ಹಾಗೆ ಮಾತನಾಡುತ್ತಾರೆ. ಇದರಿಂದ ಕೆಲಸದ ಸ್ಥಳದಲ್ಲಿಯೂ ನೆಮ್ಮದಿ ಇಲ್ಲ. ಮನೆಯಲ್ಲಿಯೂ ನೆಮ್ಮದಿ ಇಲ್ಲದರಿಂದ ಮಾನಸಿಕವಾಗಿ ಖಿನ್ನತೆಗೆ ಒಳಗಾಗಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

**ಈ. ಮೇಲಾಧಿಕಾರಿಗಳ ಕೋಪ :**

ಮನೆಕೆಲಸ ಮುಗಿಸಿ ಡಿಪೋಕ್ಕೆ ಬರುವಷ್ಟರಲ್ಲಿ ತಡವಾಗಿ ಬಿಡುತ್ತದೆ. ಆಗ ಮ್ಯಾನೇಜರ್ ಮತ್ತು ಕಂಟ್ರೋಲರ್‌ಗಳ ಕೋಪ ಮಾಡಿಕೊಳ್ಳುತ್ತಾರೆ. ಸರಿಯಾದ ಸಮಯಕ್ಕೆ ಬಸ್ ಬಿಡಲಿಲ್ಲ ಅಂದರೆ ಪ್ರಯಾಣಿಕರು ಡಿಪೋದ ಹತ್ತಿರ ಬಂದು ಬಿಡುತ್ತಾರೆ. ಜಗಳಾನು ಮಾಡುತ್ತಾರೆ. ಆಗ ಮ್ಯಾನೇಜರ್ ನಮ್ಮನ್ನು ಬೈಯುತ್ತಾರೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಕಂಟ್ರೋಲರ್‌ಗಳು ಹೇಳಿದಷ್ಟು ಕಲೆಕ್ಷನ್ ತರಲಿಲ್ಲ ಅಂದರೆ ಅವರು ಹೇಳಿದಷ್ಟು ಟ್ರಿಪ್ ಮಾಡದಿದ್ದರೆ ಕೋಪ ಮಾಡಿಕೊಳ್ಳುತ್ತಾರೆ. ಬಾಯಿಗೆ ಸಿಕ್ಕ ಹಾಗೆ ಬೈಯುತ್ತಾರೆ. ಆಗ ಮನಸ್ಸಿಗೆ ನೆಮ್ಮದಿ ಇಲ್ಲದ ಹಾಗೆ ಹಾಗುತ್ತೆ ಮನೆಗೆ ಹೋದರೆ ಊಟ ಸೇರುವುದಿಲ್ಲ. ಸ್ವಲ್ಪ ಹೊತ್ತು ನಿದ್ದೆ ಬರುವುದಿಲ್ಲ ಅಂತ ಮಹಿಳಾ ಕಂಡಕ್ಟರ್‌ಗಳು ಹೇಳಿದರು.

**ಉ. ಸಹೋದ್ಯೋಗಿಗಳ ಅಸಹನೆ :**

ಕೆಲಸದ ಸ್ಥಳದಲ್ಲಿ ಸಹೋದ್ಯೋಗಿಗಳ ನಮ್ಮ ಜೊತೆ ಸರಿಯಾಗಿದ್ದರೆ ಮಾತ್ರ ನಾವು ಕೆಲಸ ಮಾಡುವುದಕ್ಕೆ ಸಾಧ್ಯ. ಆದರೆ ಕೆಲವು ಸಹೋದ್ಯೋಗಿಗಳ ಸಹನೆಯಿಂದ ವರ್ತಿಸುವುದೇ ಇಲ್ಲ. ನಮ್ಮ ದುಡ್ಡಲ್ಲಿ ಊಟ-ತಿಂಡಿ ಕೊಡಿಸಬೇಕು. ಇನ್ಸೆಂಟಿವ್ ಕೊಡಬೇಕು. ಕೊಡದಿದ್ದರೆ ಜಗಳವಾಡುತ್ತಾರೆ. ಕಲೆಕ್ಷನ್ ಆದರೆ ಇನ್ಸೆಂಟಿವ್ ಊಟ-ತಿಂಡಿ, ಮಾಡಿಸುವುದಕ್ಕೆ ಯಾವುದೇ ತೊಂದರೆ ಇಲ್ಲ. ಆದರೆ ಕಲೆಕ್ಷನ್ ಆಗುವುದಕ್ಕಿಂತ ಮುಂಚೆನೇ ಊಟ ಕೊಡಿಸಿ ಇನ್ಸೆಂಟಿವ್ ಕೊಡಿ ಅಂತ ಕೇಳುತ್ತಾರೆ. ಕೊಡದಿದ್ದರೆ ಜಗಳ ಮಾಡುತ್ತಾರೆ ಎಂದು ಕೆಲವು ಕಂಡಕ್ಟರ್‌ಗಳು ಹೇಳಿದರು.

**ಊ. ಪ್ರಯಾಣಿಕರ ಒರಟುತನ :**

ಕಂಡಕ್ಟರ್ ಉದ್ಯೋಗ ಸಾರ್ವಜನಿಕ ಕ್ಷೇತ್ರವಾಗಿರುವುದರಿಂದ ಬಸ್‌ನಲ್ಲಿ ದಿನಾಲು ನೂರಾರು ಜನರು ಬರುತ್ತಾರೆ. ಅವರು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವರ್ತಿಸುತ್ತಿರುತ್ತಾರೆ. ಪ್ರಯಾಣಿಕರು ಹೇಳಿದ ಹತ್ತಿರ ನಿಲ್ಲಿಸದಿದ್ದರೆ ಬಸ್‌ಗೆ ಕಲ್ಲು ಹೊಡೆಯುವುದು. ಬಸ್ ಮುಂದಕ್ಕೆ ಹೋಗುವುದಕ್ಕೆ ಬಿಡುವುದಿಲ್ಲ. ಒಮ್ಮೊಮ್ಮೆ ಹೊಡೆಯುವುದಕ್ಕೂ ಬರುತ್ತಾರೆ. ಬಸ್ ಕೆಟ್ಟು ಹೋದಾಗ ಬೇರೆ ಬಸ್‌ಗೆ

ಕಳುಹಿಸುವವರೆಗೆ ತಡೆಯುವುದಿಲ್ಲ. ನಮ್ಮ ದುಡ್ಡು ನಮಗೆ ಕೊಟ್ಟು ಬಿಡಮ್ಮ ಅಂತ ಗಲಾಟೆ ಮಾಡುತ್ತಾರೆ, ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಬಸ್ ತರುವಾಗ ಚೆಕ್ ಮಾಡಿ ತರುವುದಕ್ಕೆ ಆಗುವುದಿಲ್ಲ. ಹೊಟ್ಟೆಗೆ ಏನು ತಿನ್ನುತೀರಾ ಅಂತ ಬಾಯಿಗೆ ಸಿಕ್ಕ ಹಾಗೆ ಮಾತಾಡುತ್ತಾರೆ. ಅಂತ ಸಮಯದಲ್ಲಂತೂ ಮನಸ್ಸಿಗೆ ತುಂಬಾ ನೋವಾಗುತ್ತೆ ಮನೆಗೆ ಬಂದು ಅಳುತ್ತಿರುತ್ತೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

## ೩.೯ ಮೂಲಭೂತ ಸೌಲಭ್ಯಗಳ ಕೊರತೆ :

ಹೊಸಪೇಟೆ ಮತ್ತು ಕೂಡ್ಲಿಗಿ ಬಸ್ ಡಿಪೋ ಸ್ಥಾಪನೆಯಾಗಿ ೩೦-೩೫ ವರ್ಷಗಳಾಗಿವೆ. ಸ್ಥಾಪನೆಯಾಗಿ ಇಷ್ಟು ವರ್ಷವಾದರೂ ಅಲ್ಲಿನ ಕೆಲಸಗಾರರಿಗೆ ಮೂಲಭೂತವಾಗಿ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗಿಲ್ಲ. ಅದರಲ್ಲೂ ಮಹಿಳಾ ಕಂಡಕ್ಟರ್‌ಗಳು ೬-೭ ವರ್ಷದಿಂದ ಕೆಲಸ ಮಾಡುತ್ತಿದ್ದರೂ ಅವರಿಗೆ ವ್ಯವಸ್ಥಿತವಾದ ಸೌಲಭ್ಯಗಳನ್ನು ಒದಗಿಸಿಕೊಟ್ಟಿಲ್ಲ. ಶಿಶುಪಾಲನಾ ಕೇಂದ್ರ, ಪ್ರತ್ಯೇಕ ವಿಶ್ರಾಂತಿ ಸ್ಥಳ, ವಸತಿ ಗೃಹ, ಶೌಚಾಲಯ ವ್ಯವಸ್ಥೆ ಇಲ್ಲದೆ ಇರುವುದರಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ ಎಂದು ಹೇಳಿದರು.

### ಅ. ಶಿಶುಪಾಲನಾ ಕೇಂದ್ರ :

ಸರ್ಕಾರ ಶಿಶುಪಾಲನೆಗೆ ಸಂಬಂಧಿಸಿ ಎರಡು ನೆಲೆಗಳಿಂದ ಕಾರ್ಯಕ್ರಮಗಳನ್ನು ರೂಪುಗೊಳಿಸಿದೆ. ಮೊದಲನೆಯದು ಶಿಶುಗಳ ನೆಲೆಯಿಂದ ರೂಪಗೊಂಡಿರುವ ಕಾರ್ಯಕ್ರಮ. ಶಿಶುಗಳ ಭೌತಿಕ ಅಗತ್ಯಗಳನ್ನು ಪೂರೈಸುವ ಸಂಗತಿಗಳಿಗೆ ಹೆಚ್ಚಿನ ಗಮನ ನೀಡಿದ್ದಾರೆ. ಎರಡನೆಯದು ತಾಯಿಯರ ದುಡಿಮೆ ಬಾರವನ್ನು ಕಡಿಮೆ ಮಾಡುವ ಉದ್ದೇಶದಿಂದ ಸರ್ಕಾರ ಸೌಲಭ್ಯ ಒದಗಿಸಿಕೊಟ್ಟಿದ್ದರು. ಕೂಡ್ಲಿಗಿ ಮತ್ತು ಹೊಸಪೇಟೆ ಡಿಪೋಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಮಹಿಳಾ ಕಂಡಕ್ಟರ್ ಮಕ್ಕಳಿಗೆ ಈ ಸೌಲಭ್ಯ ಒದಗಿಸಿಕೊಡದೇ ಇರುವುದರಿಂದ ಅನೇಕ ಸಂಕಷ್ಟಗಳಿಗೆ ಒಳಗಾಗಿದ್ದೇವೆ ಎಂದು ಹೇಳಿದರು. ಕೆಲವು ಮಹಿಳಾ ಕಂಡಕ್ಟರ್‌ಗಳಿಗೆ ೮ ತಿಂಗಳಿಂದ ೬ ವರ್ಷದ ಒಳಗೆ ಇರುವ ಮಕ್ಕಳು ಇದ್ದಾರೆ ನಮ್ಮ ಮಕ್ಕಳಿಗೆ ಈ ಸೌಲಭ್ಯಗಳನ್ನು ಒದಗಿಸಿಕೊಟ್ಟಿಲ್ಲ. ಆದ್ದರಿಂದ ನಮ್ಮ ಮಕ್ಕಳ ದೈಹಿಕ ಬೆಳವಣಿಗೆಗೆ ಹಾಗೂ ಆಹಾರದ ಅಗತ್ಯಗಳನ್ನು ಪೂರೈಸಿಕೊಳ್ಳಲಾಗುತ್ತಿಲ್ಲ. ಮಕ್ಕಳ ಭಾವನಿಷ್ಟ, ಜ್ಞಾನನಿಷ್ಟ ಗುಣಗಳ ಬೆಳವಣಿಗೆ ಕುಂಠಿತವಾಗುತ್ತಿದೆ. ಮಕ್ಕಳ ದೈಹಿಕ ಅಗತ್ಯಗಳನ್ನು ಪೂರೈಸುವುದು ತುಂಬಾ ಅಗತ್ಯ ಆದರೆ ಮಕ್ಕಳ ಸಾಮಾಜಿಕ ಭಾವನಾತ್ಮಕ, ಬೌದ್ಧಿಕ ಹಾಗೂ ಭಾಷಾ ನಲೆಗಳ ಅಭಿವೃದ್ಧಿಯ ಕಡೆಗೆ ಹೆಚ್ಚಿನ ಗಮನ ನೀಡುತ್ತಿಲ್ಲವಾದ್ದರಿಂದ ಮಕ್ಕಳ ದೈಹಿಕ ಬೆಳವಣಿಗೆಗೆ ಮತ್ತು ತಾಯಿಯರ ಭೌತಿಕ ಬೆಳವಣಿಗೆ ಕುಂಠಿತವಾಗುತ್ತಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಇನ್ನು ಕೆಲವು ಮಹಿಳಾ ಕಂಡಕ್ಟರ್ ತಮ್ಮ ಮಕ್ಕಳನ್ನು ನೋಡಿಕೊಳ್ಳುವುದಕ್ಕೆ ಯಾರು ಇಲ್ಲದ ಕಾರಣ ನಮ್ಮ ಮಕ್ಕಳನ್ನು ತವರುಮನೆಯಲ್ಲಿ ಅತ್ತೆ-ಮಾವಂದಿರ ಮನೆಯಲ್ಲಿ ಬಿಟ್ಟು ಬಂದಿದ್ದೇವೆ. ಮನೆಗೆ ಬಂದಾಗ ಮಕ್ಕಳ ಮುಖ ನೋಡಿ ಸಂತೋಷಪಡಬೇಕೆಂದರೆ ಮನೆಯಲ್ಲಿ ಮಕ್ಕಳು ಇಲ್ಲದ್ದರಿಂದ ಮನಸ್ಸಿಗೆ ತುಂಬಾ ನೋವಾಗುತ್ತೆ. ನಮ್ಮ ಮಕ್ಕಳನ್ನು ಪ್ರೀತಿ ಮಾಡುವ, ಮಮತೆ, ವಾತ್ಸಲ್ಯ ತೋರಿಸುವ ಅವಕಾಶ ಇಲ್ಲವೆಂಬ ಅಪರಾದಿ ಪ್ರಜ್ಞೆ ಕಾಡುತ್ತಿದೆ. ಆದರೆ ಅನಿವಾರ್ಯವಾಗಿ ಮಕ್ಕಳಿಂದ ದೂರವಿರಬೇಕಾಗಿರುವುದರಿಂದ ತುಂಬಾ ವೇದನೆ ಪಡುತ್ತೇವೆ ಎಂದು ಹೇಳಿದರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳಿಗೆ ೮ ತಿಂಗಳಿಂದ ಎರಡು ವರ್ಷದ ಒಳಗಿನ ಮಕ್ಕಳ ಸ್ಥಿತಿಯಂತೂ ಹೇಳತೀರದು. ಹಾಲು ಕುಡಿಯುವ ಮಕ್ಕಳು ಇದ್ದಾರೆ. ಮನೆ ಹತ್ತಿರ ಇರುವವರು ಮನೆಗೆ ಹೋಗಿ ಮಕ್ಕಳಿಗೆ ಹಾಲು ಕುಡಿಸಿ ಬರುತ್ತೇವೆ. ಮನೆಗಳು ದೂರವಿರುವ ಕಂಡಕ್ಟರ್‌ಗಳು ಮಕ್ಕಳನ್ನು ಅವರ ಗಂಡಂದಿರ ಅಥವಾ ಅಣ್ಣ, ತಂಗಿ, ಅಕ್ಕ, ಅಮ್ಮ ಯಾರಾದರೂ ಕರೆದುಕೊಂಡು ಬಂದು ಹಾಲು ಕುಡಿಸಿಕೊಂಡು ಹೋಗುತ್ತಾರೆ ಎಂದು ಹೇಳಿದರು. ಇನ್ನೂ ಕೆಲವು ಕಂಡಕ್ಟರ್‌ಗಳು ತಮ್ಮ ಮಕ್ಕಳಿಗೆ ಮಧ್ಯಾಹ್ನ ಹಾಲು ಕುಡಿಸದೇ ಹಾಗೇ ಹೋಗುತ್ತೇವೆ. ಆದರೆ ಒಮ್ಮೊಮ್ಮೆ ಮಧ್ಯದಲ್ಲಿ ಬಸ್ ಕೆಟ್ಟು ಹೋದಾಗ ಎದೆಹಾಲು ಹೆಚ್ಚಾಗಿ ಹಾಲು ಸೋರುತ್ತಿರುತ್ತವೆ. ಅಂತ ಸಮಯದಲ್ಲಿ ಅನುಭವಿಸಿದಂತಹ ಕಷ್ಟ ಯಾರಿಗೂ ಬೇಡ ಅಂತ ಕಣ್ಣಲ್ಲಿ ನೀರು ತಂದರು. ಮತ್ತೆ ಇನ್ನೂ ಕೆಲವರು ಮಕ್ಕಳಿಗೆ ಹಾಲು ಕೊಡದೆ ಇದ್ದಾಗ ಎದೆನೋವು ಬರುತ್ತದೆ ಎಂದು ಹೇಳಿದರು.

### ಆ. ಮಹಿಳಾ ಕಂಡಕ್ಟರ್‌ಗಳು ಶಿಶುಪಾಲನೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳು :

೧. ತಾವು ಹೊರಗೆ ಹೋಗಿ ದುಡಿಯುವ ಕೆಲಸದ ವೇಳೆ ಹಾಗೂ ಕಷ್ಟಕರವಾದ ಕರ್ತವ್ಯಗಳ ಭಾರ ಮತ್ತು ಸಮಯದ ಅಭಾವದಿಂದ ಮಗುವಿಗೆ ಸರಿಯಾದ ಗಮನ ನೀಡಲು ಅಡ್ಡಿಯಾಗಿರುವುದು.

೨. ಮನೆ ಬಿಡುವಿಲ್ಲದೆ ಕೆಲಸಗಳಿಂದುಂಟಾದ ಸುಸ್ತು ಬೇಸರಗಳಿಂದ ಮಗುವಿಗೆ ಸರಿಯಾದ ಗಮನ ನೀಡಲಾಗುತ್ತಿಲ್ಲ.

೩. ತಾಯಿ ಮಗುವಿನ ನಡುವೆ ಪ್ರೀತಿ ಮಮತೆಯ ಬಂಧ ಇಲ್ಲದಿರುವುದು ಮಗುವನ್ನು ಚೆನ್ನಾಗಿ ಪಾಲಿಸದ ಅತೃಪ್ತಿ. ಮಗುವಿನ ಆಹಾರ ಸೇವನೆಯ ಅಭ್ಯಾಸಗಳು ಹಾಗೂ ನಡತೆಯ ಬಗ್ಗೆ ಆತಂಕ.

೪. ಕುಟುಂಬದ ಇತರ ಸದಸ್ಯರಿಂದ ಮಗುವನ್ನು ಸಾಕುವುದರಲ್ಲಿ ಯಾವುದೇ ನೆರವಿಲ್ಲದಿರುವುದು ವೈಯಕ್ತಿಕವಾಗಿ ಮಗುವಿಗೆ ನೀಡಬೇಕಾದ ಗಮನ ನೀಡಲಾಗದೇ ಇರುವುದು.

೫. ಒಂದೇ ವೇಳೆಯಲ್ಲಿ ಹೊರಗಿನ ಉದ್ಯೋಗ ಮತ್ತು ಮನೆಯಲ್ಲಿರುವ ಮಗುವಿನ ಯೋಗಕ್ಷೇಮ ನೋಡಿಕೊಳ್ಳುವದಕ್ಕಾಗಲಿ ಸಾಧ್ಯವಾಗದೇ ಏಕಾಗ್ರ ಚಿತ್ತವಿಲ್ಲದೇ ಕ್ಷೋಭೆಗೆ ಒಳಗಾಗಿದ್ದಾರೆ.

ದುಡಿಯುವ ಮಹಿಳೆಯರ ವೇಗದ ಜೀವನ, ದಿನವಿಡೀ ತನ್ನ ಮಗುವಿನೊಂದಿಗೆ ಇರಲಾಗುವುದಿಲ್ಲ. ಆರಾಮವಾಗಿ ಕುಳಿತು ಮಗುವಿಗೆ ಹಾಲುಣಿಸುವುದು ಕಷ್ಟಸಾಧ್ಯದ ಕೆಲಸ.

## ಇ. ಪ್ರತ್ಯೇಕ ವಿಶ್ರಾಂತಿ ಸ್ಥಳ :

ಪ್ರತಿಯೊಬ್ಬ ಮನುಷ್ಯನಿಗೆ ನಿರ್ದಿಷ್ಟವಾದ ಕೆಲಸ ಮಾಡುವ ಸಾಮರ್ಥ್ಯವಿರುತ್ತದೆ. ಆ ಸಾಮರ್ಥ್ಯ ಇರುವಷ್ಟು ಕೆಲಸವನ್ನು ಮಾಡಿದಾಗ ವಿಶ್ರಾಂತಿ ಅತ್ಯವಶ್ಯಕವಾಗಿ ಬೇಕು.

ಸಾರ್ವಜನಿಕ ವಲಯದಲ್ಲಿ ಉದ್ಯೋಗ ಮಾಡುವಂತವರು ನಿರಂತರವಾಗಿ ಕೆಲಸ ಮಾಡುತ್ತಲೇ ಇರುತ್ತಾರೆ. ಅಂತಹ ವಲಯದಲ್ಲಿ ಬರುವ ಕಂಕಡಕ್ಟರ್‌ಗಳು ಒಬ್ಬರಾಗಿದ್ದಾರೆ. ದಿನದ ಹೆಚ್ಚಿನ ಸಮಯ ನಿಂತುಕೊಂಡೆ ಕೆಲಸ ಮಾಡುವುದರಿಂದ ಅಲ್ಪಸ್ವಲ್ಪ ಸಮಯ ಸಿಕ್ಕಾಗ ಅಥವಾ ಆರೋಗ್ಯ ಸರಿಯಿಲ್ಲದ್ದಾಗ ವಿಶ್ರಾಂತಿ ಅವಶ್ಯಕತೆ ಇರುತ್ತದೆ. ಅಂತಹ ಸಮಯದಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ನಮಗೆ ಆದಂತಹ ಸ್ಥಳ ಇದ್ದರೆ ಸ್ವಲ್ಪ ರೆಸ್ಟ್ ತೆಗೆದುಕೊಳ್ಳಬಹುದು ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಪುರುಷ ಕಂಡಕ್ಟರ್‌ಗಳಿಗೆ ವಿಶ್ರಾಂತಿ ಸ್ಥಳವಿದೆ. ನಮಗೆ ಈ ಸೌಲಭ್ಯವನ್ನು ಒದಗಿಸಿಕೊಟ್ಟಿಲ್ಲ ಎಂದು ಹೇಳಿದರು. ಮಕ್ಕಳಿಗೆ ಹಾಲು ಕುಡಿಸಲು ಒಂದು ನಿರ್ದಿಷ್ಟ ಸ್ಥಳದ ಕೊರತೆ ಇದೆ. ಎಲ್ಲಾರು ಕಾಣುವಂತಹ ಸ್ಥಳದಲ್ಲಿ ಹಾಲು ಕುಡಿಸಿದರೆ ಮಗುವಿನ ಆರೋಗ್ಯಕ್ಕೆ ತೊಂದರೆ ಆಗುತ್ತದೆ ಎಂದು ಮಧ್ಯಾಹ್ನದ ಸಮಯದಲ್ಲಿ ಹಾಗೇ ಕೆಲಸಕ್ಕೆ ಹೋಗಿ ಬಿಡುತ್ತೇವೆ. ನಾವು ರಾತ್ರಿ ಡ್ಯೂಟಿ ಮುಗಿಸಿಕೊಂಡು ಬರುವವರೆಗೂ ಮಕ್ಕಳು ಉಪವಾಸವಿರುತ್ತವೆ ಎಂದು ಹೇಳುತ್ತಾರೆ. ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ತಿಂಗಳ ಮುಟ್ಟಿನ ಸಂದರ್ಭದಲ್ಲಿ ಹೊಟ್ಟೆನೋವು, ಹೆಚ್ಚು ರಕ್ತಸ್ರಾವವಾಗುವಾಗ ಅಂತ ಸಮಯದಲ್ಲಿ ಮನೆಗೆ ಹೋಗುವುದಕ್ಕೆ ಅವಕಾಶ ಕೊಡುವುದಿಲ್ಲ. ರಜಾ ಸಹ ಕೊಡುವುದಿಲ್ಲವಾದ್ದರಿಂದ ಡಿಪೋದಲ್ಲಿಯೇ ವಿಶ್ರಾಂತಿ ಸ್ಥಳವಿದ್ದರೆ ಅನುಕೂಲವಾಗಿರುತ್ತದೆ ಎಂದು ಹೇಳಿದರು. ಇನ್ನೂ ಕೆಲವು ಮಹಿಳಾ ಕಂಡಕ್ಟರ್ ಹೆರಿಗೆ ರಜೆ ಮೂರು ತಿಂಗಳಿಗೆ ಮಾತ್ರ ರಜೆ ಸಿಗುತ್ತೆ ಈ ರಜೆ ಸಾಕಾಗುವುದಿಲ್ಲ ಅವರಿಗೆ ಅಂತ ಸಮಯದಲ್ಲಿ ತುಂಬಾ ಸುಸ್ತಾಗುತ್ತಿರುತ್ತದೆ. ಮಕ್ಕಳಿಗೆ ಹಾಲು ಕುಡಿಸಬೇಕಾಗಿರುತ್ತದೆ. ಮಕ್ಕಳಿಗೆ ಹೊರಗಡೆ ಹಾಲು ಕುಡಿಸುವುದಕ್ಕೆ ಮುಜುಗರವಾಗುತ್ತಿರುತ್ತದೆ. ನಮ್ಮದೇ ಆದಂತಹ ಸ್ಥಳ ಇದ್ದರೆ ನೆಮ್ಮದಿಯಿಂದ ಕೂತು ಹಾಲು ಕುಡಿಸಬಹುದು ಎಂದು ಹೇಳಿದ್ದರು.

## ಈ. ಶೌಚಾಲಯದ ಸಮಸ್ಯೆ :

ಪ್ರತಿಯೊಬ್ಬ ಮನುಷ್ಯನಿಗೂ ಬೇಕಾಗಿರುವ ಮೂಲಭೂತ ಸೌಕರ್ಯಗಳಲ್ಲಿ ಇದು ಸಹ ಬಹಳ ಮುಖ್ಯವಾದದ್ದಾಗಿದೆ. ಸೀಮಿತವಲ್ಲದ ಜಾಗದಲ್ಲಿ ಮಲಮೂತ್ರಗಳನ್ನು ಮಾಡಿದರೆ ಅನೇಕ ರೋಗರುಜಿನಗಳಿಗೆ ತುತ್ತಾಗುತ್ತಾರೆ. ಅಂತದರಲ್ಲಿ ಮಹಿಳೆಯರು ಎಲ್ಲಿ ಬೇಕೋ ಅಲ್ಲಿ ಮಲಮೂತ್ರಗಳನ್ನು ಮಾಡಿದರೆ ಕಷ್ಟ. ಅವರಿಗೆ ಪ್ರತ್ಯೇಕವಾದ ಶೌಚಾಲಯದ ಅವಶ್ಯಕತೆ ಇದೆ. ಆದಕಾರಣ ಸರ್ಕಾರವು ಕೂಡ ಉದ್ಯೋಗಸ್ಥ ಮಹಿಳೆಯರಿಗೆ ಈ ಸೌಲಭ್ಯಗಳನ್ನು ಒದಗಿಸಿಕೊಟ್ಟಿದೆ. ಆದರೆ ಕೂಡ್ಲಿಗಿ ಮತ್ತು ಹೊಸಪೇಟೆ ಬಸ್ ನಿಲ್ದಾಣದಲ್ಲಿ ಕಾರ್ಯನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳಿಗೆ ಶೌಚಾಲಯದ ವ್ಯವಸ್ಥೆ ಇಲ್ಲದ ಕಾರಣ

ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ ಎಂದು ಹೇಳಿದರು. ದಿನದಲ್ಲಿ ಹೆಚ್ಚಿನ ಸಮಯವನ್ನು ಬಸ್‌ನಲ್ಲಿಯೇ ಕಳೆಯುವುದರಿಂದ ತುಂಬಾ ಹೀಟ್ ಆಗುತ್ತೆ. ಎಲ್ಲಿ ಬೇಕೋ ಅಲ್ಲಿ ಬಸ್ ನಿಲ್ಲಿಸಿ ಮೂತ್ರ ವಿಸರ್ಜನೆ ಹೊರಗಡೆ ಮಾಡಬೇಕು ಎಂದರೆ ಮುಜುಗರವಾಗುತ್ತೆ. ಹಾಗೇ ಹೊರಗಡೆ ಮೂತ್ರ ವಿಸರ್ಜನೆ ಮಾಡುವುದಕ್ಕೆ ಹೋದಾಗ ಪುರುಷರಿಂದ ಅನೇಕ ತೊಂದರೆಗೆ ಒಳಗಾಗಿದ್ದೇವೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ರಾತ್ರಿ ಸಮಯದಲ್ಲಿ ಸಾರ್ವಜನಿಕ ಶೌಚಾಲಯದಲ್ಲಿ ಅನೇಕ ರೀತಿಯ ಅವ್ಯವಸ್ಥೆ ನಡೆಯುತ್ತಿರುತ್ತದೆ. ಶೌಚಾಲಯಗಳನ್ನು ನೋಡಿಕೊಳ್ಳುವುದಕ್ಕೆ ಊರಲ್ಲಿ ಭಿಕ್ಷೆ ಬೇಡುವವರನ್ನು ಅಥವಾ ವೇಶ್ಯಾವೃತ್ತಿಯಲ್ಲಿ ತೊಡಗಿರುವ ಮಹಿಳೆಯರನ್ನು ಇಟ್ಟಿದ್ದಾರೆ. ಅಂತವರು ಅಲ್ಲಿ ಇದ್ದರೆ ನಡೆಸುವುದು ಅಂತಹ ಚಟುವಟಿಕೆಗಳೆ. ಅವುಗಳನ್ನು ನೋಡಿ ಹೊಸಪೇಟೆ ಬಸ್ ನಿಲ್ದಾಣದಲ್ಲಿ ಮಲಮೂತ್ರ ವಿಸರ್ಜನೆಗೆ ಹೋಗುವುದಕ್ಕೆ ಭಯವಾಗುತ್ತೆ ಎಂದು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಶೌಚಾಲಯದ ಸ್ವಚ್ಛವಾಗಿಲ್ಲ. ಅಲ್ಲಿ ಏನಾದರೂ ಮಲಮೂತ್ರ ವಿಸರ್ಜನೆಗೆ ಹೋದರೆ ನಮಗೆ ಲೈಂಗಿಕ ರೋಗಗಳಿಗೆ ಒಳಗಾಗಿದ್ದೇವೆ ಎಂದು ಅನಿಸುತ್ತದೆ. ಶರೀರಾಂಗದಲ್ಲಿ ತುರಿಸುವುದು, ಹುರಿಯಾಗುತ್ತಿರುತ್ತದೆ ಎಂದು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

## ಉ. ವಸತಿಗೃಹ ವ್ಯವಸ್ಥೆ :

ಹೊಸಪೇಟೆ ಮತ್ತು ಕೂಡ್ಲಿಗಿ ಡಿಪೋದಲ್ಲಿ ಕೆಲಸ ಮಾಡುವ ಮಹಿಳಾ ಕಂಡಕ್ಟರ್‌ಗಳಿಗೆ ವಸತಿಗೃಹ ವ್ಯವಸ್ಥೆ ಇಲ್ಲದೆ ಇರುವುದರಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ರಾತ್ರಿ ಕೆಲಸ ಮುಗಿಸಿ ಮನೆಗೆ ಬರುವಷ್ಟರಲ್ಲಿ ೧೦-೧೧ ಗಂಟೆಯಾಗುತ್ತೆ, ದಾರಿಯಲ್ಲಿ ಬರುವಾಗ ಹುಡುಗರು ಚುಡಾಯಿಸುವುದು, ಬಾಯಿಗೆ ಬಂದ ಹಾಗೇ ಮಾತನಾಡಿಕೊಳ್ಳುವುದು ಮಾಡುತ್ತಿರುತ್ತಾರೆ. ನಮಗೆ ನಮ್ಮದೇ ಆದಂತಹ ವಸತಿಗೃಹಗಳು ಡಿಪೋಗಳ ಹತ್ತಿರ ಮನೆಗಳು ಇದ್ದರೆ ನಾವು ಎಷ್ಟೊತ್ತಿಗಾದರೂ ಬಂದರೂ ಏನು ಸಮಸ್ಯೆಯಾಗಲ್ಲ. ಒಮ್ಮೊಮ್ಮೆ ಬಸ್ ಕೆಟ್ಟುಹೋದರೆ ರಾತ್ರಿ ಬರುವುದು ೧೨-೧ ಗಂಟೆಯಾಗಬಹುದು. ಅಂತಹ ಸಮಯದಲ್ಲಿ ಮನೆಗಳು ದೂರದಲ್ಲಿ ಇದ್ದರೆ ಅಷ್ಟೊತ್ತಿನಲ್ಲಿ ಮನೆಗೆ ಹೋಗುವಾಗ ಕುಡುಕರು ಮತ್ತು ಕೆಲವು ಪುರುಷರು ಬರುತ್ತೀಯ ಅಂತ ಕೇಳಿರುವ ಸನ್ನಿವೇಶವನ್ನು ಎದುರಿಸಿದ್ದೇವೆ ಅಂತ ಹೇಳಿದರು. ರಾತ್ರಿ ಅಷ್ಟೊತ್ತಿನಲ್ಲಿ ಮನೆಗೆ ಹೋದರೆ ಅಕ್ಕಪಕ್ಕದವರು ಇವಳು ಯಾವ ಸೀಮೆಗೆ ಇಲ್ಲದ ಕೆಲಸ ಮಾಡುತ್ತಾಳೋ ಏನೋ ಅಂತ ವ್ಯಂಗ್ಯವಾಗಿ ಮಾತನಾಡಿಕೊಳ್ಳುತ್ತಾರೆ ಎಂದು ಹೇಳಿದರು. ಆದ್ದರಿಂದ ಡಿಪೋದಲ್ಲಿ ಕೆಲಸ ಮಾಡುವವರಿಗೆ ಪ್ರತ್ಯೇಕವಾಗಿ ವಸತಿಗೃಹಗಳಿದ್ದರೆ ಅಕ್ಕಪಕ್ಕದವರಿಗೆ ನಮ್ಮ ಕೆಲಸ ಎಂತಹದು ಎಂದು ಅಂತ ಗೊತ್ತಿರುತ್ತದೆ. ಅವರು ನಮ್ಮ ಬಗ್ಗೆ ವ್ಯಂಗ್ಯವಾಗಿ ಮಾತನಾಡಿಕೊಳ್ಳುವುದಿಲ್ಲ ಅಂತ ಹೇಳಿದರು. ಹೀಗೆ ಮಹಿಳಾ ಕಂಡಕ್ಟರ್‌ಗಳ ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.

### ೩.೧೦ ಮಹಿಳಾ ಕಂಡಕ್ಟರ್‌ಗಳಿಗೆ ಬಿಡುವಿನ ಸಮಸ್ಯೆ :

ಬಿಡುವು ಮತ್ತು ವಿರಾಮ ಎಂದರೆ ಕೇವಲ ವಿಶ್ರಾಂತಿ ಅಥವಾ ಪುರುಸೊತ್ತು ಎಂಬ ಅರ್ಥವಲ್ಲ. ವಿರಾಮ ಎಂದರೆ ಒಬ್ಬ ವ್ಯಕ್ತಿಗೆ ಸಮಯವನ್ನು ತನ್ನ ಇಚ್ಛೆಯಂತೆ ರೂಪಿಸಿಕೊಳ್ಳಲು ಇರುವ ಸಮಯ. ವ್ಯಕ್ತಿಗೆ ಲಭ್ಯವಿರುವ ಮತ್ತು ಯಾವ ನಿರ್ಬಂಧಗಳಿಗೆ ಒಳಪಡದೆ ಇರುವಂತಹ ಸಮಯ. ಸಮಯವನ್ನು ಬೇಕಾದ ರೀತಿಯಲ್ಲಿ ವ್ಯಯಿಸುವ ಆಯ್ಕೆ ಸ್ವಾತಂತ್ರ್ಯ ವ್ಯಕ್ತಿಗಿರುತ್ತದೆ.

ಹಿಂದಿನಂತೆ ನಾಲ್ಕು ಗೋಡೆಗಳ ಮಧ್ಯೆ ದುಡಿದು ಉತ್ತಮ ಗೃಹಿಣಿಯ ಪಟ್ಟವೇರಿ ತಕ್ಕ ಮಟ್ಟಿಗೆ ವಿಶ್ರಾಂತಿ ಪಡೆಯುತ್ತಿದ್ದ ಮಹಿಳೆಗೆ ಇಂದು ವಿಶ್ರಾಂತಿ ಎಂಬುದ್ಧೇ ಮರೀಚಿಕೆಯಾಗಿದೆ. ದುಡಿಯುವ ಯಂತ್ರವಾಗಿ ಪರಿಸ್ಥಿತಿಯ ಕೈಗೊಂಬೆಯಾಗಿ ಮಹಿಳೆಯರು ಬದಲಾವಣೆಗಳಿಗೆ ಪರಿಪೂರ್ಣವಾಗಿ ಹೊಂದಿಕೊಳ್ಳಲಾಗದೆ ತಡವರಿಸುತ್ತಿದ್ದಾರೆ.

ವಿರಾಮದಲ್ಲಿ ಕಳೆಯುವ ಸಮಯ ನಿರೀಕ್ಷೆ ಹಾಗೂ ನೆನಪು ಎರಡು ಹಿತಕರವಾಗಿರುತ್ತದೆ. ಈ ಸಮಯ ಆರ್ಥಿಕವಾಗಿ ಉಪಯುಕ್ತವಾಗಿರಬೇಕೆಂದು ಬಲವಂತವಿರಬಾರದು. ಇಂತಹ ಸಮಯದಲ್ಲಿ ವ್ಯಕ್ತಿತ್ವ ಬೆಳವಣಿಗೆ ಮನರಂಜನೆಗೆ ಲಭ್ಯವಾಗುವುದು. ಈ ಎಲ್ಲಾ ಉಪಯೋಗಗಳು ಅವಳ ಜೀವನದ ಹಂತವನ್ನು ಅವಲಂಬಿಸಿದೆ. ವಯಸ್ಸು, ವರ್ಗ, ಉದ್ಯೋಗ, ಕುಟುಂಬದ ಸ್ಥಿತಿ, ಜೈವಿಕ ಸ್ಥಿತಿ ಮುಂತಾದವು ಲಿಂಗದ ಜೊತೆಯಲ್ಲಿ ವಿರಾಮವನ್ನು ನಿರ್ಧಾರಿತವಾಗುತ್ತದೆ.

ತಮ್ಮ ಕೌಟುಂಬಿಕ ಆದಾಯ ಹೆಚ್ಚಿಸಿಕೊಳ್ಳುವ ಸಲುವಾಗಿ ತನ್ನ ಸ್ವಂತ ಕಾಲ ಮೇಲೆ ತಾನು ನಿಲ್ಲುವ ಸಲುವಾಗಿ ಅನಿವಾರ್ಯವಾದ ಪರಿಸ್ಥಿತಿಯಿಂದ ಸಂಸಾರ ನಿರ್ವಹಣೆ ಸಲುವಾಗಿ ಮನೆಯ ಜವಾಬ್ದಾರಿಯೊಂದಿಗೆ ಉದ್ಯೋಗ ಮಾಡುತ್ತಿರುವ ಮಹಿಳಾ ಕಂಡಕ್ಟರ್‌ಗಳು ಸದಾ ಕೆಲಸದ ಜಂಜಾಟದಲ್ಲಿ ಒದ್ದಾಡುತ್ತಿರುವ ಇವರಿಗೆ ಬಿಡುವು ವಿಶ್ರಾಂತಿ ಇದೆಯೆ ಬಿಡುವು ಇದ್ದರೆ ಅವರು ಯಾವ ಚಟುವಟಿಕೆಯಲ್ಲಿ ಬಿಡುವನ್ನು ಕಳೆಯುತ್ತಾರೆ ಎಂಬುದನ್ನು ತಿಳಿದುಕೊಳ್ಳೋಣ.

ಸಾರ್ವಜನಿಕ ವಲಯದಲ್ಲಿ ಉದ್ಯೋಗ ಮಾಡುತ್ತಿರುವ ಮಹಿಳಾ ಕಂಡಕ್ಟರ್‌ಗಳಿಗೆ ವಿಶ್ರಾಂತಿ ಅಥವಾ ವಿರಾಮವೆಂಬುದು ಮರೀಚಿಕೆಯಾಗಿದೆ ಎಂದು ಕೆಲವು ಮಹಿಳಾ ಕಂಡಕ್ಟರ್‌ಗಳು ಹೇಳಿದರು.

ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ಬೆಳಿಗ್ಗೆ ೫.೩೦ಕ್ಕೆ ಕೆಲಸಕ್ಕೆಹೋದರೆ ರಾತ್ರಿ ೭-೮ ಗಂಟೆಗೆ ಮನೆಗೆ ಬರುತ್ತೇವೆ. ಬಂದು ಮನೆಕೆಲಸ ಮತ್ತು ಅಡುಗೆ ಮಾಡಿಟ್ಟು ಊಟ ಮಾಡಿ ಮಲಗುವಷ್ಟರಲ್ಲಿ ರಾತ್ರಿ ೧೦-೧೧ ಗಂಟೆಯಾಗುತ್ತೆ. ಸುಸ್ತಾಗಿ ಬಂದಿರುತ್ತೇವೆ. ಬೇರೇ ಮಾಡುವುದಕ್ಕೆ ಆಗುವುದಿಲ್ಲ. ಎಷ್ಟೊಂದು ವರ್ಷದಿಂದ ಬಿ.ಎ ಮುಗಿಸಬೇಕು ಅಂದುಕೊಂಡಿದ್ದೇನೆ ಆದರೆ ಕೆಲಸದ ಒತ್ತಡದಲ್ಲಿ ಬಿಡುವಿಲ್ಲದ ಕಾರಣ ಓದುವಾದಕ್ಕೆ ಸಮಯನೇ ಇರುವುದಿಲ್ಲ ಎಂದು ಕೆಲವರು ಹೇಳಿದರು.

ಇನ್ನೂ ಕೆಲವು ಮಹಿಳಾ ಕಂಡಕ್ಟರ್‌ಗಳು ನಮ್ಮ ಹವ್ಯಾಸವಾಗಿ ಪುಸ್ತಕಗಳನ್ನು ಓದುವುದು. ಕಾದಂಬರಿ, ಕವನ ಬರೆಯುವುದು, ಹಾಡು, ಸಂಗೀತ ಇದ್ದರು ಈ ಹೊರಗಿನ ಕೆಲಸದಿಂದ ಬಂದು ಒಳಗಿನ ಕೆಲಸ ಎರಡು ಮಾಡುವುದರಲ್ಲಿ ನಮ್ಮ ಜೀವನ ಕಳೆಯುತ್ತಿದ್ದೇವೆ. ಬೇರೆಯ ಚಟುವಟಿಕೆಗಳಲ್ಲಿ ತೊಡಗಿಸಲು ಆಗುತ್ತಿಲ್ಲ ಎಂದು ಹೇಳಿದರು.

ಮಹಿಳಾ ಕಂಡಕ್ಟರ್ ಬೆಳಿಗ್ಗೆಯಿಂದ ರಾತ್ರಿಯವರೆಗೂ ಸತತವಾಗಿ ದುಡಿಯಬೇಕು ರಾತ್ರಿ ಕೆಲಸ ಮುಗಿಸಿಕೊಂಡು ಮನೆಗೆ ಬಂದರೆ ಮನೆಯ ಕೆಲಸವನ್ನು ಸಹ ಮಾಡಬೇಕು ಹಾಗಾಗಿ ಮಹಿಳೆಯರಿಗೆ ಕೆಲಸವಿಲ್ಲದ ವೇಳೆಯೂ ಇರುವುದಿಲ್ಲ

## ಅಧ್ಯಾಯ ನಾಲ್ಕು

## ಸಮಾರೋಪ

ಪ್ರಸ್ತುತ ಅಧ್ಯಯನವನ್ನು ಸಾರ್ವಜನಿಕ ವಲಯದಲ್ಲಿ ಉದ್ಯೋಗ ಮಾಡುತ್ತಿರುವ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳನ್ನು ಕೇಂದ್ರವಾಗಿಸಿಕೊಂಡು ರಚನೆಯಾಗಿದೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಹೊಸಪೇಟೆ ತಾಲೂಕು ಘಟಕದ ಡಿಪೋದಲ್ಲಿ ಕಾರ್ಯ ನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿಗಳನ್ನು ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನದ ಸೈದ್ಧಾಂತಿಕತೆಯ ಹಿನ್ನೆಲೆಯಲ್ಲಿ ಈ ಸಂಪ್ರಬಂಧವನ್ನು ರಚಿಸಲಾಗಿದೆ. ಈ ಸಂಪ್ರಬಂಧದಕ್ಕೆ ಸಂಬಂಧಿಸಿದ ನಿರೂಪಣೆಯನ್ನು ಹೆಚ್ಚಾಗಿ ಕ್ಷೇತ್ರಕಾರ್ಯವನ್ನು ಆದರಿಸಿ ರೂಪಿಸಲಾಗಿದೆ. ಜನರ ದೈನಿಕ ಓಡಾಟದ ಚಲನೆಯ ಬಸ್ಸಿನಲ್ಲಿ ಭರಭರನೆ ಓಡಾಡುತ್ತಾ ಕೈಕಟ್ಟಿ ಕುಂತಿರುವವರಿಗೆ ಗಧರಿಸುತ್ತಾ, ದಬಾಯಿಸುತ್ತಾ ತಿಳುವಳಿಕೆಯನ್ನು ಹೇಳವ ನಿಜಕ್ಕೂ ಕುತೂಹಲ. ತೋಳಿಗೆ ಚರ್ಮದ ಚೀಲ, ಕೊರಳಲ್ಲಿ ಟಿಕೇಟ್ ಮಿಶನ್, ಕೈಯಲ್ಲಿ ಸೀಟಿ ಹಿಡಿದು ಬಸ್ಸಿನಲ್ಲಿ ರಶ್ ಇರುವಾಗ ಎಲ್ಲರ ಮಧ್ಯೆ ನುಗ್ಗಿ ಯಾವುದೇ ಭಯ, ಮುಜುಗರವಿಲ್ಲದೆ ಇವರು ನಿರಂತರವಾಗಿ ಕೆಲಸ ಮಾಡುತ್ತಿದ್ದಾರೆ.

ಹೀಗೆ ಕೆಲಸ ಮಾಡುವ ಕೆಲಸ ಕಣ್ಣಿಗೆ ಕಾಣುವಷ್ಟು ಸರಳವಾಗಿಲ್ಲ. ಈ ರೀತಿಯ ಕೆಲಸವನ್ನು ಹೇಗೋ ನಿಭಾಯಿಸಿಕೊಂಡು ಹೋಗಬಲ್ಲಳು. ಆದರೆ ಪುರುಷರಿಂದ ಉದ್ದೇಶಪೂರ್ವಕವಾಗಿ ಬರುವ ಸಮಸ್ಯೆಗಳನ್ನು ಎದುರಿಸಿ ಈ ಉದ್ಯೋಗವನ್ನು ಉಳಿಸಿಕೊಳ್ಳಲು ಈ ಪುರುಷಪ್ರಧಾನ ಸಮಾಜದಲ್ಲಿ ಮಾಡಬೇಕಾಗಿದೆ.

ಮಹಿಳೆಯರು ಸಾರ್ವಜನಿಕ ವಲಯಗಳ ಉದ್ಯೋಗಳಿಗೆ ಪ್ರವೇಶ ಪಡೆದರೆ ಒಂದಿಷ್ಟು ಆರ್ಥಿಕ ಸ್ವಾವಲಂಬನೆ ದೊರಕಬೇಕೆಂದೆನಿಸುತ್ತದೆ. ಆದರೆ ಪ್ರವೇಶಾವಕಾಶದ ನಂತರ ಮಹಿಳೆಯರಿಗೆ ಹಲವು

ತೊಡಕುಗಳನ್ನು ಸಮಾಜ ಪುರುಷ ಪ್ರಧಾನ ಸಮಾಜ ಸೃಷ್ಟಿಸಿದೆ. ಮಹಿಳೆ ಲೈಂಗಿಕತೆಗೆ ಸಂಬಂಧಿಸಿದ್ದರಿಂದಲೇ ಸಾರ್ವಜನಿಕ ವಲಯಗಳಾದ ಉದ್ಯೋಗಳಲ್ಲಿ ಪುರುಷರ ಜೊತೆ ಮಾಡನಾಡಬಾರದು ಎಂದು ನಿರ್ಬಂಧ ಹಾಕಲಾಗಿದೆ. ಇಷ್ಟೆಲ್ಲಾ ನಿರ್ಬಂಧಗಳನ್ನು ಪುರುಷ ಪ್ರಧಾನ ಸಮಾಜ ಹೇರಿದರೂ ಮನೆಯ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ದೃಷ್ಟಿಯಿಂದ ಮತ್ತು ತಂದೆ ತಾಯಿ ರಕ್ಷಣೆ ಹಾಗೂ ತಂಗಿಯರ ಭವಿಷ್ಯಕ್ಕಾಗಿ ಪುರುಷರಿಗೆ ಹೆಗಲಿಗೆ ಹೆಗಲು ಕೊಟ್ಟು ಮಹಿಳೆಯರು ಈ ಬಗೆಯ ವೃತ್ತಿಗಳಲ್ಲಿ ದುಡಿಯುತ್ತಿದ್ದಾರೆ. ಈ ಪುರುಷಪ್ರಧಾನ ಸಮಾಜದಲ್ಲಿ ಸಾಂಪ್ರದಾಯಿಕವಲ್ಲದ ಕೆಲಸಗಳಿಗೆ ಸೇರಿಕೊಂಡರೆ ಅನೇಕ ಅಡೆತಡೆಗಳನ್ನು ಒಡ್ಡುತ್ತದೆ. ಈ ನಿಟ್ಟಿನಲ್ಲಿ ಸದರಿ ಸಂಪ್ರಬಂಧದಲ್ಲಿ ಮಹಿಳಾ ಕಂಡಕ್ಟರ್‌ಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಎರಡು ಡಿಪೋಗಳಲ್ಲಿ (ಕೂಡ್ಲಿಗಿ ಮತ್ತು ಹೊಸಪೇಟೆ) ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿಗಳು ಹಾಗೂ ಸಮಸ್ಯೆಗಳ ಬಗ್ಗೆ ಮಾಹಿತಿ ಪಡೆದುಕೊಳ್ಳಲು ಅವರ ಜೊತೆ ನಿರಂತರ ಸಂಪರ್ಕವಿಟ್ಟುಕಂಡು ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿಗಳ ಸಮಸ್ಯೆಗಳು ಹಾಗೂ ಎಂಬ ಶೀರ್ಷಿಕೆಯಡಿಯಲ್ಲಿ ಬರೆಯಲ್ಪಟ್ಟಿರುವ ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನದ ವೈಧಾನಿಕತೆ ಮತ್ತು ಪ್ರಕರಣದ ಅಧ್ಯಯನದ ಬಗ್ಗೆ ತಿಳಿಸಲಾಗಿದೆ. ಅನೇಕ ಉಪಶೀರ್ಷಿಕೆಯನ್ನು ಮಾಡಿಕೊಳ್ಳಲಾಗಿದೆ. ಪ್ರಸ್ತಾವನೆಯಲ್ಲಿ ಸಾರಿಗೆ ಸಂಸ್ಥೆಯ ಲಿಂಗಾಧಾರಿತ ಕಾರ್ಯಸ್ವರೂಪವನ್ನು ತಿಳಿಸಲಾಗಿದೆ. ಕಂಡಕ್ಟರ್‌ಗಳಾಗಿ ಸಾರಿಗೆ ಸಂಸ್ಥೆಯಲ್ಲಿ ಮಹಿಳೆಯರು ಪ್ರವೇಶ ಪಡೆದಿರುವ ಬಗ್ಗೆ ಚರ್ಚಿಸಲಾಗಿದೆ. ಮತ್ತು ಅಧ್ಯಯನದ ಉದ್ದೇಶದಲ್ಲಿ ಕಂಡಕ್ಟರ್ ಉದ್ಯೋಗಕ್ಕೆ ಸಂಬಂಧಿಸಿದಂತೆ ಲಿಂಗಪೂರ್ವಗ್ರಹಗಳನ್ನು ಗ್ರಹಿಸಲಾಗಿದೆ. ಕುಟುಂಬದ ವ್ಯವಸ್ಥೆಯೊಳಗೆ ಇದ್ದ ಮಹಿಳೆಯರು ಈ ಕ್ಷೇತ್ರಕ್ಕೆ ವಿಸ್ತರಿಸಿಕೊಳ್ಳಲು ಕಾರಣವೇನು ಎಂಬುದನ್ನು ತಿಳಿಸಲಾಗಿದೆ. ಈ ಕೆಲಸ ಮಾಡುವುದರಿಂದ ಸಮಾಜ ಮತ್ತು ಕುಟುಂಬದಲ್ಲಿ ಇವರ ಸ್ಥಾನಮಾನವೇನು ಎಂಬುದನ್ನು ಚರ್ಚಿಸಲಾಗಿದೆ. ಕೆಲಸದ ಸ್ಥಳದಲ್ಲಿ ಮೂಲಭೂತ ಸೌಕರ್ಯ ಇಲ್ಲದಿರುವುದರಿಂದ ಯಾವ ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ತಿಳಿಯಪಡಿಸುವುದು ಸಂಶೋಧನಾ ಕ್ಷೇತ್ರಕ್ಕೆ ಅಗತ್ಯವಾಗಿದೆ.

ಪ್ರಸ್ತುತ ಅಧ್ಯಯನವನ್ನು ಸ್ತ್ರೀವಾದಿ ದೃಷ್ಟಿಕೋನ ಮತ್ತು ಸೈದ್ಧಾಂತಿಕ ಹಿನ್ನೆಲೆಯಲ್ಲಿ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳನ್ನು ಗ್ರಹಿಸಲಾಗಿದೆ. ಈ ಕ್ಷೇತ್ರಕಾರ್ಯದ ಮೂಲಕ ಸಂದರ್ಶನ ವಿಧಾನದಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ರಚಿತ ಮತ್ತು ಅರಚಿತ ಪ್ರಶ್ನಾವಳಿಯ ಮೂಲಕ, ಅವಲೋಕನ ವಿಧಾನದ ಮೂಲಕ, ವ್ಯಕ್ತಿನಿಷ್ಠತೆ, ಗುಣಾತ್ಮಕ ವಿಧಾನದ ಮೂಲಕ ಹೇಳಿದ್ದೇನೆ. ಇನ್ನೊಂದು ಅಧ್ಯಾಯದಲ್ಲಿ ಉದ್ಯೋಗಸ್ಥ ಮಹಿಳೆಯರ ಬಗ್ಗೆ ಚರ್ಚಿಸಲಾಗಿದೆ. ಮತ್ತು ಕಂಡಕ್ಟರ್ ವೃತ್ತಿಯ ಬಗ್ಗೆ ಸಮಾಜದಲ್ಲಿರುವ ಲಿಂಗಪೂರ್ವಗ್ರಹಗಳ ಬಗ್ಗೆ ತಿಳಿಸಲಾಗಿದೆ. ಕೌಟುಂಬಿಕ ಸಮಸ್ಯೆಗಳ ಬಗ್ಗೆ, ಕಂಡಕ್ಟರ್ ಉದ್ಯೋಗಕ್ಕೆ ಬರಲು ಇರುವ ಕಾರಣಗಳನ್ನು ತಿಳಿಸಲಾಗಿದೆ. ಕೆಲಸದ ಸ್ಥಳದಲ್ಲಿ ಮೇಲಾಧಿಕಾರಿಗಳಿಂದ.

ಪ್ರಯಾಣಿಕರಿಂದ, ಸಹೋದ್ಯೋಗಿಗಳಿಂದ ಎದುರಿಸುವಂತಹ ಸಮಸ್ಯೆಯ ಬಗ್ಗೆ ಲೈಂಗಿಕ ಕಿರುಕುಳ, ಮಾನಸಿಕ ಹಿಂಸೆ ಸಹಕಾರದ ಕೊರತೆಯ ಬಗ್ಗೆ ಹೇಳಲಾಗಿದೆ. ವಿವಾಹಿತ ಮಹಿಳಾ ಕಂಡಕ್ಟರ್‌ಗಳ ಬಗ್ಗೆ ಹೇಳಲಾಗಿದೆ. ಆರೋಗ್ಯದ ಸಮಸ್ಯೆಗಳಲ್ಲಿ ಕಂಡಕ್ಟರ್‌ಗಳ ಬಿಡುವಿಲ್ಲದೆ ನಿರಂತರವಾಗಿ ಕೆಲಸ ಮಾಡುತ್ತಿರುವುದರಿಂದ ಹಾಗೂ ಅಂತಹ ಮಾನಸಿಕ ಮತ್ತು ದೈಹಿಕ ತೊಂದರೆಗಳ ಬಗ್ಗೆ ತಿಳಿಸಲಾಗಿದೆ. ಕೆಲಸದ ಸ್ಥಳದಲ್ಲಿ ಮೂಲಭೂತ ಸೌಲಭ್ಯಗಳ ಕುರಿತಾದ ನನಗೆ ದೊರೆತ ಆಕರ ಸಾಮಗ್ರಿಗಳನ್ನು ಆಧಾರವಾಗಿಟ್ಟುಕೊಂಡು ಬರೆಯಲಾಗಿದೆ.

ಅಧ್ಯಯನದ ಅನುಕೂಲಕ್ಕೆ ಗುರುತಿಸಿಕೊಂಡ ಅಧ್ಯಯನ ಕ್ಷೇತ್ರಕಾರ್ಯ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಹೊಸಪೇಟೆ ಡಿಪೋಗಳಲ್ಲಿ ಕಾರ್ಯ ನಿರ್ವಹಿಸುವ ಮಹಿಳಾ ಕಂಡಕ್ಟರ್‌ಗಳನ್ನು ನೋಡುವ ದೃಷ್ಟಿಕೋನದ ಬಗ್ಗೆ ಮಹಿಳೆಯ ಲೈಂಗಿಕತೆಗೆ ಸಂಬಂಧಿಸಿದಂತೆ ಉಂಟಾಗುವ ಸಮಸ್ಯೆಗಳ ಬಗ್ಗೆ ತಿಳಿಸಲಾಗಿದೆ. ದೈಹಿಕವಾಗಿ ಮತ್ತು ಮಾನಸಿಕವಾಗಿ ಆರೋಗ್ಯಕ್ಕೆ ಸಂಬಂಧಿಸಿದಂತೆ ಎದುರಿಸುವ ತೊಂದರೆಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಬಿಡುವಿಲ್ಲದ ಕಾರಣ ಅವರ ವ್ಯಕ್ತಿತ್ವದ ಬೆಳವಣಿಗೆಗೆ ಅಡ್ಡಿ ಉಂಟಾಗಿದೆ ಎಂಬುದನ್ನು ಕಾಣಬಹುದು. ಹೆಣ್ಣಾಗಿರುವ ಕಾರಣಕ್ಕಾಗಿಯೇ ಕೆಲಸದ ಸ್ಥಳದಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಹೇಳಲಾಗಿದೆ. ಕೆಲಸದ ಸ್ಥಳದಲ್ಲಿ ಶೌಚಾಲಯ ವ್ಯವಸ್ಥೆ, ಪ್ರತ್ಯೇಕ ವಿಶ್ರಾಂತಿ ಸ್ಥಳ, ಶಿಶುಪಾಲನಾ ಕೇಂದ್ರ, ವಿಶ್ರಾಂತಿ ಗೃಹ ಇಲ್ಲದೆಯಿರುವುದರಿಂದ ಯಾವ ಯಾವ ರೀತಿಯ ತೊಂದರೆಗಳನ್ನು ಎದುರಿಸುತ್ತಿದ್ದಾರೆ ಎಂಬುದರ ಬಗ್ಗೆ ನನಗೆ ದೊರೆತ ಕ್ಷೇತ್ರಕಾರ್ಯದ ಆಧಾರದ ಮೇಲೆ ಚರ್ಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಕೈಗೊಂಡಿರುವ ಹಿನ್ನೆಲೆ ಮತ್ತು ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳ ಸ್ವರೂಪವನ್ನು ಕುರಿತು ಸಂಕ್ಷಿಪ್ತವಾಗಿ ಹೇಳಲಾಗಿದೆ. ಅಲ್ಲದೆ ಮುಖ್ಯವಾಗಿ ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹೇಳಲಾಗಿದೆ. ಕೊನೆಯಲ್ಲಿ ಕೆಲವು ಸಲಹೆಗಳನ್ನು ಕೂಡ ಕೊಡಲಾಗಿದೆ. ಇವುಗಳನ್ನು ಸಂಕ್ಷಿಪ್ತವಾಗಿ ಈ ಮುಂದೆ ವಿವರಿಸಲಾಗಿದೆ.

### ೪.೧ ಅಧ್ಯಯನ ಫಲಿತಗಳು

ಸಾರಿಗೆ ಸಂಸ್ಥೆಯ ಸಾರ್ವಜನಿಕ ವಲಯವಾಗಿದೆ. ಈ ವಲಯದಲ್ಲ ಅನೇಕ ದಶಕಗಳ ಕಾಲ ಪುರುಷರು ಮಾತ್ರ ಕೆಲಸ ಮಾಡುತ್ತಿದ್ದರು. ಈ ಸಂಸ್ಥೆಯು ಪುರುಷರಿಗಾಗಿ ಎನ್ನುವ ರೀತಿಯಲ್ಲಿ ಈ ವ್ಯವಸ್ಥೆ ನಿರ್ವಚನಗೊಂಡಿತ್ತು. ಆದರೆ ೨೧ನೆಯ ಶತಮಾನದಿಂದೀಚೆಗೆ ಮಹಿಳೆಯರು ಈ ವಲಯಕ್ಕೆ ಪ್ರವೇಶಿಸಿದ್ದಾರೆ. ಪುರುಷರಿಗೆ ಸರಿಸಮಾನವಾಗಿ ಕೆಲಸ ಮಾಡುತ್ತಿದ್ದಾರೆ. ಆದರೆ ಈ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಲೈಂಗಿಕತೆಗೆ ಸಂಬಂಧಿಸಿದಂತೆ ಅನೇಕ ನಿರ್ಬಂಧಗಳನ್ನು ಹೇರಿದೆ. ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಾಂಪ್ರದಾಯಕಲ್ಲದ ಕೆಲಸಗಳಲ್ಲಿ ತೊಡಗಿಕೊಂಡರೆ ಯಾವ ಯಾವ ರೀತಿಯ ಸಮಸ್ಯೆಗಳನ್ನು ತಂದೊಡ್ಡುತ್ತದೆ ಎಂಬುದನ್ನು ಅಧ್ಯಯನದ ಸಮೀಕ್ಷೆಯ ಮೂಲಕ ಮತ್ತು ಕ್ಷೇತ್ರಕಾರ್ಯಗಳ ಮೂಲಕ ತಿಳಿಸಲಾಗುತ್ತದೆ.

ಪ್ರಸ್ತುತ ಅಧ್ಯಯನವು ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದ್ದು, ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಯ ಬಗ್ಗೆ ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳ ಕುರಿತು ದೊರೆತ ಆಕರ ಸಾಮಗ್ರಿಗಳ ಮಾಹಿತಿಯನ್ನು ಚರ್ಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಮಹಿಳಾ ಕಂಡಕ್ಟರ್‌ಗಳ ಸಮಸ್ಯೆಗಳ ಬಗ್ಗೆ ದೊರೆತ ಆಕರ ಸಾಮಗ್ರಿಗಳ ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಪಡೆದು ವಿಶ್ಲೇಷಣೆಗೆ ಒಳಪಡಿಸಿದಾಗ ಒಟ್ಟು ಈ ಅಧ್ಯಯನದಿಂದ ಈ ಕೆಳಗಿನ ಫಲಿತಗಳು ಕಂಡುಬಂದಿವೆ.

೧. ನಾನು ಕ್ಷೇತ್ರಕಾರ್ಯ ಮಾಡಿದ ಕೂಡ್ಲಿಗಿ ಮತ್ತು ಹೊಸಪೇಟೆ ಡಿಪೋಗಳಲ್ಲಿ ಮಹಿಳೆಯರು ಕೆಳದರ್ಜೆಯ ಮತ್ತು ಕಡಿಮೆ ಸಂಬಳವಿರುವ ಉದ್ಯೋಗದಲ್ಲಿ ತೊಡಗಿರುವುದು ಕಂಡುಬಂದಿದೆ.

೨. ಕಂಡಕ್ಟರ್‌ಗಳ ವೃತ್ತಿಯ ಬಗ್ಗೆ ಸಮಾಜದಲ್ಲಿ ಲಿಂಗ ಪೂರ್ವಗ್ರಹಗಳು ಇರುವುದು ಗಮನಕ್ಕೆ ಬಂದಿದೆ.

೩. ಕ್ಷಣಕ್ಷಣಕ್ಕೂ ಏರುತ್ತಿರುವ ಸಾರಿಗೆ ವೆಚ್ಚ, ಶಿಕ್ಷಣದ ದುಬಾರಿ ವೆಚ್ಚ, ಈ ಮೂಲಭೂತ ಅಗತ್ಯವನ್ನು ಪೂರೈಸಿಕೊಳ್ಳಲೇಬೇಕಾಗಿರುವ ಪರಿಸ್ಥಿತಿಯನ್ನು ಈ ವ್ಯವಸ್ಥೆ ತಂದೊಡ್ಡಿರುವುದರಿಂದ ಜೀವನ ಸಾಗಿಸಲು ಕುಟುಂಬದಲ್ಲಿ ಯಾರಾದರೂ ದುಡಿಯಲೇಬಾಕಾದ ಅನಿವಾರ್ಯತೆಯಿರುತ್ತದೆ. ಹಾಗಾಗಿ ಸಮಕಾಲೀನ ಸಮಾಜದಲ್ಲಿ ಸ್ತ್ರೀ ಸ್ವಾವಲಂಬನೆಯಾಗಲು ಪ್ರಯತ್ನಿಸುತ್ತಿರುವುದರಿಂದ ಮಹಿಳೆ ಕುಟುಂಬದಿಂದ ಹೊರ ಬಂದಿರುವುದು ತಿಳಿದುಬಂದಿದೆ.

೪. ಈ ವೃತ್ತಿಯಲ್ಲಿ ಕೆಳಜಾತಿ ಮತ್ತು ಕೆಳವರ್ಗದ ಮಹಿಳೆಯರು ಹೆಚ್ಚಾಗಿರುವುದು ಕಂಡುಬಂದಿದೆ.

೫. ಹೆಣ್ಣಿನ ಲೈಂಗಿಕತೆಗೆ ಸಂಬಂಧಿಸಿದಂತೆ ಈ ವೃತ್ತಿಯನ್ನು ಮಹಿಳೆಯರಿಗೆ ನಿರಾಕರಿಸುವುದು ಕಾಣಬಹುದು.

೬. ಮಹಿಳಾ ಕಂಡಕ್ಟರ್‌ಗಳು ಪ್ರಯಾಣಿಕರಿಂದಲೇ ಹೆಚ್ಚು ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬಂದಿದೆ.

೭. ಈ ವೃತ್ತಿ ಮಾಡುವ ಮಹಿಳೆಯರಿಗೆ ಬಿಡುವಿಲ್ಲದೆ ನಿರಂತರವಾಗಿ ಕೆಲಸ ಮಾಡುವುದರಿಂದ ಅವರು ಶೈಕ್ಷಣಿಕವಾಗಿ ಮತ್ತು ಸಾಂಸ್ಕೃತಿಕವಾಗಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವುದಕ್ಕೆ ಆಗದೆ ಇರುವುದು ಗಮನಕ್ಕೆ ಬಂದಿದೆ.

೮. ಮಹಿಳಾ ಕಂಡಕ್ಟರ್‌ಗಳು ದೈಹಿಕವಾಗಿ ಮತ್ತು ಮಾನಸಿಕವಾಗಿ ಅನಾರೋಗ್ಯಕ್ಕೆ ತುತ್ತಾಗಿದ್ದಾರೆ.

೯. ಮಹಿಳಾ ಕಂಡಕ್ಟರ್‌ಗಳೇ ತಮ್ಮದೇ ಆದಂತಹ ಸಂಘಟನೆ ಇಲ್ಲದೆ ಇರುವುದು ಗಮನಕ್ಕೆ ಬಂದಿದೆ.

೧೦. ಮೂಲಭೂತ ಸೌಲಭ್ಯದ ಕೊರತೆ ಇರುವುದರಿಂದ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

೪.೨ **ಸಲಹೆಗಳು :**

೧. ಈ ವೃತ್ತಿಯ ಬಗ್ಗೆ ಸಮಾಜದಲ್ಲಿ ಇರುವ ಲಿಂಗಪೂರ್ವಗ್ರಹಗಳು ಹೋಗಬೇಕು. ಈ ಕೆಲಸದ ಬಗ್ಗೆ ಜನರಲ್ಲಿರುವ ಕೀಳು ಮನೋಭಾವನೆಯನ್ನು ಹೋಗಲಾಡಿಸಬೇಕು. ಮಹಿಳೆಯರಿಗೆ ವಿವಾಹವೊಂದೇ ಜೀವನದ ಮುಖ್ಯ ಗುರಿಯಲ್ಲ. ಅದರಾಚೆಗೂ ಅವಳು ತನ್ನ ಬದುಕನ್ನು ವಿಸ್ತರಿಸಕೊಳ್ಳಬಹುದು ಎಂಬುದನ್ನು ತಿಳಿದುಕೊಳ್ಳಬೇಕು. ಲೈಂಗಿಕತೆಗೆ ಸಂಬಂಧಿಸಿದರಿಂದಲೇ ಅವಳ ಮೇಲೆ ನಿರ್ಬಂಧ ಹಾಕಬಾರದು.

೨. ಕಂಡಕ್ಟರ್ ಹುದ್ದೆಗೆ ಕೆಳಜಾತಿಯ ಮಹಿಳೆಯರಷ್ಟೇ ಅಲ್ಲ ಮೇಲ್‌ವರ್ಗದ ಮಹಿಳೆಯರು ಈ ವೃತ್ತಿಗೆ ಬರುವಂತೆ ಕುಟುಂಬದಲ್ಲಿ ಪ್ರೋತ್ಸಾಹ ನೀಡಬೇಕು.

೩. ಹೊಸ ಕ್ಷೇತ್ರಕ್ಕೆ ಪ್ರವೇಶಿಸಿದಂತೆ ಮಹಿಳೆಯರಿಗೆ ಗೃಹಿಣಿ ಕರ್ತವ್ಯದಿಂದ ರಿಯಾಯಿತಿ ದೊರೆಯಬೇಕು. ಮಹಿಳೆಗೆ ಕೊಡಲಾದ ಆದರ್ಶವಾದ ಶೀಲ, ಪಾತಿವ್ರತ್ಯ, ತಾಯ್ತನ ಮೊದಲಾದ ಸಂಗತಿಗಳನ್ನು ಕಂಡಕ್ಟರ್‌ಗಳ ಅಸ್ತಿತ್ವದ ನೆಲೆಯಿಂದ ನಿರ್ವಚನಗೊಳ್ಳಬೇಕು.

೪. ಪುರುಷ ಸಹೋದ್ಯೋಗಿಗಳು ಮಹಿಳಾ ಕಂಡಕ್ಟರ್‌ಗಳನ್ನು ತಮ್ಮ ಜೊತೆ ಕೆಲಸ ಮಾಡುವ ಸಹೋದ್ಯೋಗಿಗಳಂತೆ ಕಾಣಬೇಕು. ಅವರ ಹತ್ತಿರ ಗಂಭೀರವಾಗಿ ನಡೆದುಕೊಳ್ಳಬೇಕು.

೫. ಕೆಲಸದ ಸ್ಥಳದಲ್ಲಿ ಪುರುಷ ಸಹೋದ್ಯೋಗಿಗಳು ಮತ್ತು ಪ್ರಯಾಣಿಕರು ಮಹಿಳಾ ಕಂಡಕ್ಟರ್‌ಗಳ ಜೊತೆ ಅಸಭ್ಯವಾಗಿ ವರ್ತಿಸಿದ್ದರೆ ಮತ್ತು ಅವರ ವ್ಯಕ್ತಿತ್ವಕ್ಕೆ ದಕ್ಕೆ ತರುವ ರೀತಿಯಲ್ಲಿ ನಡೆದುಕೊಂಡರೆ ತತ್‌ಕ್ಷಣದಲ್ಲಿ ಅವರಿಗೆ ಶಿಕ್ಷೆಯಾಗುವ ರೀತಿಯಲ್ಲಿ ಸರಕಾರ ಕಾನೂನು ಮಾಡಬೇಕು. ಕಂಡಕ್ಟರ್‌ಗಳ ಜೊತೆ ಅಸಭ್ಯವಾಗಿ ವರ್ತಿಸದೆ ಸಹನೆಯಿಂದ ಅವರೊಡನೆ ನಡೆದುಕೊಳ್ಳಿ ಎಂದು ಪಾಂಪ್ಲೆಂಟುಗಳನ್ನು ಮಾಡಿ ಬಸ್ ನಿಲ್ದಾಣದಲ್ಲಿ ಮತ್ತು ಬಸ್‌ಗಳ ಮೇಲೆ ಹಚ್ಚಬೇಕು.

೬. ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಮಹಿಳೆಯರನ್ನು ಮೇಲ್ದರ್ಜೆಯ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳಬೇಕು.

೭. ಮಹಿಳಾ ಕಂಡಕ್ಟರ್‌ಗಳಿಗೆ ಹೆರಿಗೆ ರಜೆ ಹೆಚ್ಚು ಮಾಡಬೇಕು. ಅಥವಾ ಗರ್ಭಿಣಿ ಇರುವಾಗ ಅಥವಾ ಬಾಣಂತಿತನದ ಸಮಯದಲ್ಲಿ ಕಂಡಕ್ಟರ್ ಡ್ಯೂಟಿಗೆ ಹಾಕುವ ಬದಲು ಕಛೇರಿಯಲ್ಲಿಯೋ ಇರುವಂತಹ ಕೆಲಸಗಳನ್ನು ಮಾಡಲು ಅವಕಾಶ ಮಾಡಿಕೊಡಬೇಕು.

೮. ಕೆಲಸ ಸ್ಥಳದಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಿಕೊಡಬೇಕು.

# ಅನುಬಂಧಗಳು

೧. ಪ್ರಶ್ನಾವಳಿ

೨. ಆಯ್ದ ಸಂದರ್ಶನಗಳ ಮಾಹಿತಿ

೩. ಗ್ರಂಥಋಣ

೪. ಛಾಯಾಚಿತ್ರಗಳು

# ಮಹಿಳಾ ಕಂಡಕ್ಟರ್‌ಗಳ ಸ್ಥಿತಿಗತಿ ಹಾಗೂ ಸಮಸ್ಯೆಗಳು

## ಪ್ರಶ್ನಾವಳಿ

೧. ಹೆಸರು :

೨. ವಯಸ್ಸು :

೩. ಶಿಕ್ಷಣ :

೪. ಜಾತಿ :

೫. ಊರು :

೬. ಈ ಕೆಲಸಕ್ಕೆ ಸೇರಿ ಎಷ್ಟು ವರ್ಷವಾಯಿತು? ದಿನವಾಯಿತು?

೭. ನೀವು ಈ ಕೆಲಸಕ್ಕೆ ನಿಮ್ಮ ಸ್ವಂತ ಇಚ್ಛೆಯಿಂದ ಬಂದಿದ್ದಾ? ಅಥವಾ ಮನೆಯವರ ಒತ್ತಾಯಕ್ಕೆ ಬಂದಿದ್ದಾ? ಮನೆಯ ಆರ್ಥಿಕ ಸ್ಥಿತಿಯಿಂದ ಈ ಕೆಲಸಕ್ಕೆ ಸೇರಿದಿರಾ?

೮. ನೀವು ಕಂಡಕ್ಟರ್ ಆದ ಮೇಲೆ ಸುತ್ತಮುತ್ತಲಿನವರು ಹೇಗೆ ಟ್ರೀಟ್ ಮಾಡುತ್ತಾರೆ?

೯. ಡ್ಯೂಟಿ ಮುಗಿಸಿ ಮನೆಗೆ ಬಂದು ಏನು ಕೆಲಸ ಮಾಡುತ್ತೀರಾ?

೧೦. ನಿಮಗೂ ಮತ್ತು ಪುರುಷ ಕಂಡಕ್ಟರ್‌ಗೂ ಒಂದೇ ತರಹದ ಕೆಲಸ ಇರುತ್ತಾ? ನೀವು ಹೆಣ್ಣು ಮಕ್ಕಳು ಎನ್ನುವ ಕಾರಣಕ್ಕೆ ಕೆಲಸದಲ್ಲಿ ಏನಾದರೂ ರಿಯಾಯಿತಿ ಇದೆಯಾ?

೧೧. ನಿಮಗೆ ಲಾಂಗ್ ರೂಟ್ ಹಾಕುತ್ತಾರಾ? ಸಿಟಿ ಬಸ್‌ಗಳಿಗೆ ಮಾತ್ರ ಹಾಕುತ್ತಾರಾ?

೧೨. ನಿಮಗೆ ಲಾಂಗ್ ರೂಟ್ ಕೆಲಸ ಮಾಡುವುದಕ್ಕೆ ಇಷ್ಟ ಇದೆಯಾ?

೧೩. ಲಾಂಗ್ ರೂಟ್ ಇಷ್ಟಾ ಆದರೆ ಏಕೆ ಇಷ್ಟ ಆಗುತ್ತೆ?

೧೪. ಪ್ರಯಾಣಿಕರು ನಿಮಗೆ ಸಹಕಾರ ನೀಡುತ್ತಾರಾ?

೧೫. ನೀವು ಕಂಡಕ್ಟರ್ ಆಗಿ ಕೆಲಸ ಮಾಡುತ್ತಿರುವುದರಿಂದ ನಿಮ್ಮ ಮದುವೆ ವಿಷಯದಲ್ಲಿ ಏನಾದರು ತೊಂದರೆಗಳು ಎದುರಾಗಿದ್ದವಾ?

೧೬. ನೀವು ಕಂಡಕ್ಟರ್ ಆಗಿರೋದರಿಂದ ನಿಮ್ಮ ವೈವಾಹಿಕ ಜೀವನದಲ್ಲಿ ಸಮಸ್ಯೆಗಳೇನಾದರು ಎದುರಿಸುತ್ತಿದ್ದೀರಾ? ಎದುರಿಸುತ್ತಿದ್ದರೆ ಯಾವ ರೀತಿಯ ಸಮಸ್ಯೆಗಳು ಎದುರಾಗಿವೆ?

೧೭. ನಿಮಗೆ ರಾತ್ರಿ ಶಿಫ್ಟ್ ಮತ್ತು ಹಗಲು ಶಿಫ್ಟ್? ಇವರೆರಲ್ಲಿ ಯಾವ ಶಿಫ್ಟ್ ಅನುಕೂಲವಾಗಿದೆ ಅನ್ನಿಸುತ್ತೆ?

೧೮. ಸಮಾಜದಲ್ಲಿ ಪುರುಷ ಕಂಡಕ್ಟರ್‌ಗಳಿಗೆ ಸಿಗೋಷ್ಟೇ ಗೌರವ ನಿಮಗೂ ಸಿಕ್ತಾ ಇದೆಯಾ?

೧೯. ನಿಮ್ಮ ಜೊತೆ ಇರುವ ಪುರುಷ ಸಹೋದ್ಯೋಗಿಗಳು ನಿಮ್ಮನ್ನು ಹೇಗೆ ಟ್ರೀಟ್ ಮಾಡುತ್ತಾರೆ?

೨೦. ನಿಮಗೆ ಡ್ಯೂಟಿ ಅರ್ಲಟ್ ಮಾಡುವಾಗ ನಿಮ್ಮನ್ನು ಹೇಗೆ ಟ್ರೀಟ್ ಮಾಡುತ್ತಾರೆ.?

೨೧. ಕೆಲಸಕ್ಕೆ ಸೇರಿದ ಪ್ರಾರಂಭದಲ್ಲಿ ಎದುರಿಸಿದ ಸಮಸ್ಯೆಗಳು ಏನು?

೨೨. ನಿಮಗೆ ಗೊತ್ತಿರದಾ ರೂಟ್‌ಗೆ ಹಾಕಿದರೆ ಹೇಗೆ ಸಮಸ್ಯೆಗಳನ್ನು ಎದುರಿಸುತ್ತೀರಾ?

೨೩. ಪ್ರಯಾಣಿಕರು ನಿಮ್ಮನ್ನು ಕಂಡಕ್ಟರ್ ಅನ್ನುವ ದೃಷ್ಟಿಯಿಂದ ನೋಡುತ್ತಾರಾ ಅಥವಾ ಹೆಣ್ಣು ಮಕ್ಕಳು ಎನ್ನುವ ದೃಷ್ಟಿಯಿಂದ ನೋಡಾತ್ತಾರಾ?

೨೪. ನಿಮಗೆ ಮುಂದೆ ಓದಬೇಕು ಎಂಬ ಆಸೆ ಇಲ್ವಾ?

೨೫. ಇಲ್ಲ ಎಂದರೆ ಏಕೆ ಮುಂದುವರಿಯಲಿಲ್ಲ?

೨೬. ಇಲ್ಲ ಎಂದರೆ ಏಕೆ ಇರಲಿಲ್ಲ?

೨೭. ನೀವು ಈ ಕೆಲಸಕ್ಕೆ ಸೇರಿದ ಮೇಲೆ ನಿಮ್ಮ ಆರೋಗ್ಯದಲ್ಲಿ ಯಾವ ರೀತಿಯ ಸಮಸ್ಯೆಗಳು ಎದುರಾಗಿವೆಯೇ?

೨೮. ನಿಮಗೆ ಈ ಕೆಲಸ ಕಷ್ಟ ಅನ್ನಿಸುತ್ತಾ? ಕಷ್ಟ ಅನ್ನಿಸಿದ್ದರು ನೀವು ಈ ಕೆಲಸದಲ್ಲಿ ಉಳಿಯುವುದಕ್ಕೆ ಕಾರಣ ಏನು?

೨೯. ತಿಂಗಳ ಮುಟ್ಟಿನ ಸಂದರ್ಭದಲ್ಲಿ ನಿಮಗೆ ರಜೆ ಕೊಡುತ್ತಾರಾ?

(ಎ) ಇಲ್ಲ (ಬಿ) ಹೌದು

೩೦. 'ಇಲ್ಲ' ಅಂದರೆ ನಿಮಗೆ ಈ ದಿನಗಳಲ್ಲಿ ರಜಾ ಬೇಕು ಅಂತ ಅನ್ನಿಸುತ್ತಾ?

೩೧. ಮಧ್ಯದಲ್ಲಿ ಬಸ್ ಕೆಟ್ಟು ಹೋದರೆ ಏನು ಮಾಡುತ್ತೀರಾ? ಅಂತಹ ಸಮಯದಲ್ಲಿ ಎದುರಿಸಿದಂತಹ ಸಮಸ್ಯೆಗಳೇನು?

೩೨. ನಿಮಗೆ ಶೌಚಾಲಯದ ವ್ಯವಸ್ಥೆ ಸರಿಯಾಗಿ ಇದೆಯಾ?

೩೩. ನಿಮಗೆ ವಿಶ್ರಮಿಸಲು ಸ್ಥಳಾವಕಾಶ ಕಲ್ಪಿಸಲಾಗಿದೆಯಾ?

(ಎ) ಇಲ್ಲ (ಬಿ) ಹೌದು

೩೪. 'ಇಲ್ಲ' ಎಂದರೆ ಇರಬೇಕು ಅಂತ ಅನ್ನಿಸುತ್ತಾ?

೩೫. ಈ ಕೆಲಸ ಮಾಡುವುದರಿಂದ ನೀವು ತಾಯಿಯಾಗುವುದಕ್ಕೆ ಅಡ್ಡಿಯಾಗುವುದೆಯೇ?

೩೬. ನಿಮ್ಮ ಯೂನಿಫಾರ್ಮ್ ಬಗ್ಗೆ ನಿಮ್ಮ ಅಭಿಪ್ರಾಯ?

೩೭. ನಿಮ್ಮ ಇಲಾಖೆಯಿಂದ ನಿಮಗೆ ಇರುವಂತಹ ಸೌಲಭ್ಯಗಳ ಬಗ್ಗೆ ಹೇಳುತ್ತೀರಾ?

೩೮. ನಿಮ್ಮ ಈ ಕೆಲಸಕ್ಕೆ ಮೆಯಲ್ಲಿ ಸಹಕಾರ ಇದೆಯಾ?

೩೯. ನಿಮ್ಮ ಈ ಕೆಲಸದಿಂದ ಮನೆಯವರ ನೆರೆಹೊರೆಯವರ ಸಂಬಂಧಗಳ ನಡುವೆ ಅಂತರ ಉಂಟಾಗುತ್ತಿದೆ. ಎನಿಸುತ್ತಿದಾಯಾ?

೪೦. ನಿಮ್ಮ ಈ ಕೆಲಸದಿಂದ ನಿಮ್ಮ ಮಕ್ಕಳ ಪಾಲನೆಗೆ ತೊಂದರೆಯಾಗುತ್ತಿದೆಯಾ?

## ೨. ಆಯ್ದ ಸಂದರ್ಶನಗಳ ಮಾಹಿತಿ :

೧. **ಶಬಾನಾ :** (ಹೆಸರು ಬದಲಾವಣೆ ಮಾಡಲಾಗಿದೆ) ನನ್ನ ಗಂಡ ಡಿಪೋದಲ್ಲಿ ಮೆಕಾನಿಕ್ ಆಗಿ ಕೆಲಸ ಮಾಡುತ್ತಿದ್ದರು. ೧೦ ವರ್ಷದ ಹಿಂದೆ ಆಕ್ಸಿಡೆಂಟ್‌ನಲ್ಲಿ ತೀರಿಕೊಂಡರು. ಅವರ ಕೆಲಸಕ್ಕೆ ನಾನು ಬಂದಿದ್ದೇನೆ. ಕೆಲಸಕ್ಕೆ ಸೇರಿ ೮ ವರ್ಷವಾಗಿದೆ.

**ಪ್ರಾರಂಭದಲ್ಲಿ ಎದುರಿಸಿದಂತಹ ಸಮಸ್ಯೆಗಳು :**

ನಾನು ನನ್ನ ಗಂಡ ಬದುಕಿದ್ದಾಗ ಎಂದು ಹೊರಗಡೆ ಬಂದಿಲ್ಲ. ಅವರು ತೀರಿಕೊಂಡ ಮೇಲೇನೆ ನಾನು ಸಾರ್ವಜನಿಕರ ಹತ್ತಿರ ಬೆರೆತಿದ್ದು ಪ್ರಾರಂಭದಲ್ಲಿ ತುಂಬಾ ಕಷ್ಟವಾಗುತ್ತಿತ್ತು. ಕೆಲಸಕ್ಕೆ ಸೇರಿದ ಪ್ರಾರಂಭದಲ್ಲಿ ಡಿಪೋದಲ್ಲಿ ಸಹೋದ್ಯೋಗಿಗಳು ಮತ್ತು ಮೇಲಾಧಿಕಾರಿಗಳು ನಾನು ಕೆಲಸ ಮಾಡುವುದಕ್ಕೆ ಸಹಕಾರನೇ ಕೊಡುತ್ತಿರಲಿಲ್ಲ. ತುಂಬಾ ತಾತ್ಸಾರ ಮಾಡುತಿದ್ದರು. ನಾನು ತುಂಬಾ ತೆಳ್ಳಗೆ ಇದಿದ್ದರಿಂದ ಕೆಲವು ಡ್ರೈವರ್‌ಗಳು ನನ್ನನು ಅವರ ಜೊತೆ ಡ್ಯೂಟಿಗೆ ಹಾಕಿಸಿಕೊಳ್ಳುತ್ತಿರಲಿಲ್ಲ. ಸಾರ್ ಈಯಮ್ಮ ತುಂಬಾ ತೆಳ್ಳಗೆ ಇದ್ದಾಳೆ ಬೇಗ ಬೇಗ ಟಿಕೇಟ್ ತೆಗೆದುಕೊಳ್ಳುವುದಿಲ್ಲ. ಗಂಟೆಗಟ್ಟಲೆ ಬಸ್ ನಿಲ್ಲಿಸಿಕೊಂಡು ಬಿಡುತ್ತಾಳೆ ಎಂದು ಕಂಪ್ಲೆಂಟ್ ಮಾಡುತ್ತಿದ್ದರು. ಪ್ರಯಾಣಿಕರು ಬಸ್ ಮೇಲೆ ಕೂತುಕೊಂಡಾಗ ಮೇಲೆ ಹತ್ತಿ ಟಿಕೇಟ್ ತೆಗೆದುಕೊಳ್ಳುವುದಕ್ಕೆ ಸ್ವಲ್ಪ ಕಷ್ಟವಾಗುತ್ತಿತ್ತು. ಕೆಳಗಡೆ ಒಂದು ಟಿಕೇಟ್ ತೊಗೊಳ್ಳಿ ಅಂದರೆ ಹೆಣ್ಣುಮಕ್ಕಳು ಮೀಸಲಾತಿ ಕೇಳುತೀರಾ ನಾವು ಗಂಡುಮಕ್ಕಳಿಗಿಂತ ಯಾವುದರಲ್ಲಿಯು ಕಡಿಮೆ ಇಲ್ಲ ಅಂತೆಲ್ಲ ಹೇಳುತೀರಾ. ಮೇಲೆ ಹತ್ತಿ ಟಿಕೇಟ್ ತಗಳ್‌ರ್ರಿ ಅಂತ ಇದ್ದರು ಅವರು ಅಂದಿದೆ ತಡ ಬೇಗ ಬೇಗ ಬಸ್ ಮೇಲೆ ಹತ್ತಿ ಟಿಕೇಟ್ ತೆಗೆದುಕೊಳ್ಳುವುದಕ್ಕೆ ಪ್ರಾರಂಭ ಮಾಡಿದೆ ಆಗ ಎಲ್ಲಾರು ಬಾಯಿ ಮುಚ್ಚಿಕೊಂಡರು.

**ಸಮಾಜದ ದೃಷ್ಟಿಯಲ್ಲಿ :**

ನಾನು ಮೊದಲೇ ಮುಸ್ಲಿಂ ಮಹಿಳೆ ನಮ್ಮ ಜಾತಿಯಲಿ ಹೆಣ್ಣುಮಕ್ಕಳನ್ನು ಹೊರಗಡೆ ಹೋಗುವುದಕ್ಕೆ ಬಿಡುವುದಿಲ್ಲ. ಮನೆಯಲ್ಲಿ ಗಂಡ, ತಂದೆ, ಅಣ್ಣರನ್ನು ಬಿಟ್ಟರೇ ಬೇರೆ ಗಂಡಸರ ಮುಂದೆ ಹಾದು ಹೋಗುವಂತಿಲ್ಲ. ಪರಪುರುಷರನ್ನು ಮಾತನಾಡಿಸಂಗಿಲ್ಲ ಅಂತದರಲ್ಲಿ ನಾನು ಈ ಕಂಡಕ್ಟರ್ ಕೆಲಸಕ್ಕೆ ಹೋಗುತ್ತಿರುವುದರಿಂದ ನಮ್ಮ ಜಾತಿಗೆ ಸೇರಿದ ಮನೆಗಳ ಅಕ್ಕಪಕ್ಕದವರು ನಮ್ಮನ್ನು ಸರಿಯಾಗಿ ಮಾತನಾಡಿಸುವುದಿಲ್ಲ. ಜಾತಿಗೆ ಸಂಬಂಧಿಸಿದಂತೆ ಯಾವುದೇ ಕಾರ್ಯಕ್ರಮಗಳನ್ನು ಮಾಡಿದರು ನಮ್ಮನ್ನು ಕರೆಯುವುದಿಲ್ಲ. ಒಮ್ಮೊಮ್ಮೆ ಬಸ್ ಕೆಟ್ಟು ಹೋದಾಗ ರಾತ್ರಿ ಲೇಟಾಗಿ ಮನೆಗೆ ಬರುತ್ತಿರವಾಗ ಇವಳ್ಯಾವ ಸೀಮ್ಯಾಗ ಇಲ್ಲದ ಕೆಲಸಕ್ಕೆ ಹೋಗುತ್ತಾಳೋ ಎಂದು ಹೀಯಾಳಿಸುತ್ತಾರೆ.

**ಆರೋಗ್ಯ ಸಮಸ್ಯೆ :**

ಬಸ್‌ನಲ್ಲಿ ಹೆಚ್ಚಾಗಿ ನಿಂತುಕೊಂಡೇ ಕೆಲಸ ಮಾಡುವುದರಿಂದ ಕೈಕಾಲು ನೋವು, ಸೊಂಟ, ಬೆನ್ನುನೋವು ಬರುತ್ತೆ ಕೆಲಸದ ಒತ್ತಡದಿಂದ ಬಿಪಿ ಹೆಚ್ಚಾಗುತ್ತಿರುತ್ತೆ. ಒಮ್ಮೆ ಹಿಂಗೆ ಬಸ್‌ನಲ್ಲಿಯೇ ಮೂರ್ಚೆ ಬಂದು ಬಿದ್ದು ಬಿಟ್ಟಿದ್ದೆ. ನನಗೆ ಬಳ್ಳಾರಿ ರೂಟಿಗೆ ಹೆಚ್ಚಾಗಿ ಡ್ಯೂಟಿಗೆ ಹಾಕುವುದರಿಂದ ಮೈನ್ಸ್ ಧೂಳಿನಿಂದ ಉಸಿರಾಟದ ತೊಂದರೆಯಾಗಿ ಶ್ವಾಸಕೋಶದ ಆಪರೇಷನ್ ಮಾಡಿಸಿಕೊಂಡಿದ್ದೇನೆ. ಕೆಲಸದ ಒತ್ತಡದಿಂದ ತಿಂಗಳಿಗೆ ೨ ಸಾರಿ ಮುಟ್ಟಾಗುತ್ತೀನಿ ಅದರಿಂದ ತುಂಬಾ ನಿಶ್ಶಕ್ತಿಯಾಗುತ್ತದೆ.

**ಪ್ರಯಾಣಿಕರಿಂದ ಎದುರಿಸಿದಂತಹ ಸಮಸ್ಯೆಗಳು :**

**ಲೈಂಗಿಕ ಕಿರುಕುಳ :**

ಬಸ್‌ನಲ್ಲಿ ತುಂಬಾ ಜನ ಇದ್ದಾಗ ಬೇಕೂ ಅಂತಲೇ ಮುಟ್ಟುವುದು, ಬಸ್ ಇಳಿಯುವಾಗ ಬೇಕೂ ಅಂತಲೇ ತಗಲಿಸಿಕೊಂಡು ಹೋಗುವುದು. ಟಿಕೇಟ್ ತೆಗೆದುಕೊಳ್ಳುವಾಗ ಜಾಗವಿದ್ದರು, ನಮಗೆ ಅಂಟಿಕೊಂಡೆ ನಿಲ್ಲುತ್ತಾರೆ, ದೂರ ಸರಿರೀ ಅಂದರು ಸರಿಯುವುದಿಲ್ಲ, ಜಾಗ ಇಲ್ಲ ಅಂತ ಹೇಳುವುದು, ಬೇಕೂ ಅಂತನೇ ನನ್ನ ಪಕ್ಕದಲ್ಲಿ ಕುಂತುಕೊಳ್ಳುವುದು, ನನ್ನ ಸೊಂಟಕ್ಕೆ ತಗಲುವ ಹಾಗೆ ಕೈಯನ್ನು ಇಟ್ಟುಕೊಂಡು ಕೂಡುವುದು, ಟಿಕೇಟ್ ಕೊಡುವಾಗ ಕೈ ಹಿಡಿದುಕೊಳ್ಳುವುದು. ಟಿಕೇಟ್ ಕೊಟ್ಟು ಚಿಲ್ರೆ ವಾಪಸ್ ಕೊಡುವುದಕ್ಕೆ ಹೋದಾಗ ಚೆನ್ನಾಗಿ ಇದ್ದೀಯಾ ಇಟ್ಟುಕೋ ಅಂತ ಹೇಳುತ್ತಿದ್ದರು.

**ಪ್ರಯಾಣಿಕರಿಂದ ಇನ್ನಿತರ ಸಮಸ್ಯೆಗಳು :**

ಹಳ್ಳಿಗಳಿಗೆ ಹೋಗುವ ಪ್ರಯಾಣಿಕರು ಅವರು ಹೇಳಿದ ಹತ್ತಿರ ಸ್ಟಾಪ್ ಕೊಡದೆ ಇದ್ದಿದಕ್ಕಾಗಿ ಒಂದು ಸಾರಿ ಹೊಡೆದಿದ್ದರು. ಟಿಕೇಟ್ ತೆಗೆದುಕೊಳ್ಳುವಾಗ ಮುಂದೆ ಇರುವವರನ್ನೂ ಟಿಕೇಟ್ ಕೇಳಿದರೆ ಹಿಂದೆ ಇರುವವರು ತೆಗೆದುಕೊಳ್ಳುತ್ತಾರೆ ಎಂದು ಹಿಂದೆ ಇರುವವರನ್ನು ಕೇಳಿದರೆ ಮುಂದೆ ಇರುವವರು ತೆಗೆದುಕೊಳ್ಳುತ್ತಾರೆ ಎಂದು ಟಿಕೇಟ್ ತೆಗೆದುಕೊಳ್ಳದೆ ಸತಾಯಿಸುತ್ತಿದ್ದರು. ಬಸ್ ಕೆಟ್ಟು ಹೋದಾಗಲಂತೂ ನೀನು ಹೊಟ್ಟೆಗೆ ಏನು ತಿನ್ನುತೀಯಾ ಸರಿಯಾಗಿರುವ ಬಸ್ ತರುವುದಕ್ಕೆ ಬರುವುದಿಲ್ಲ ಅಂತ ಬಾಯಿಗೆ ಸಿಕ್ಕ ಹಾಗೆ ಬೈಯುತ್ತಿದ್ದರು.

**ಸಹೋದ್ಯೋಗಿಗಳು :**

ಕೆಲವು ಡ್ರೈವರ್‌ಗಳು ನಾವು ಕೆಲಸ ಮಾಡುವುದಕ್ಕೆ ಸಹಕಾರ ಮಾಡುತ್ತಾರೆ. ಇನ್ನೂ ಕೆಲವರು ಮಾಡುವುದಿಲ್ಲ. ನಾನು ವಿವಾಹಿತಾಗಿದ್ದರಿಂದ ನನ್ನನ್ನು ತಾತ್ಸಾರದಿಂದ ನೋಡುತ್ತಿದ್ದರು. ನನ್ನನ್ನು ಅವರ ಜೊತೆ ಡ್ಯೂಟಿಗೆ ಹಾಕಿಸಿಕೊಳ್ಳುತ್ತಿರಲಿಲ್ಲ. ಆಯಮ್ಮ ಬೇಡ ಸಾರ್. ಆಯಮ ಸರಿಯಾಗಿ ಬೇಗ ಬೇಗ ಟಿಕೇಟ್ ತೆಗೆದುಕೊಳ್ಳುವುದಿಲ್ಲ. ಗಂಟೆಗಟ್ಟಲೆ ಬಸ್ ನಿಲ್ಲಿಸಿ ಟಿಕೇಟ್ ತೆಗೆದುಕೊಳ್ಳುತ್ತಾರೆ. ಅಂತ

ಕಂಪ್ಲೆಂಟ್ ಮಾಡುತ್ತಿದ್ದರು. ಇನ್ನೂ ಕೆಲವು ಸಹೋದ್ಯೋಗಿಗಳು ನನ್ನ ಗಂಡ ಸತ್ತಿರುವುದು ಗೊತ್ತಿರುವುದರಿಂದ ನನ್ನ ಹೊಲಿಸಿಕೊಳ್ಳಲು ತುಂಬಾ ಪ್ರಯತ್ನ ಪಡುತ್ತಿದ್ದರು.

**೨. ಸುಧಾ :** ನಾನು ಕೆಲಸಕ್ಕೆ ಬಂದು ೫ ವರ್ಷವಾಗಿದೆ. ನಾನು ಪಿಯುಸಿ ಓದಿದ್ದೀನಿ. ನನಗೆ ಮದುವೆಯಾಗಿಲ್ಲ.

**ಪ್ರಾರಂಭದಲ್ಲಿ ಎದುರಿಸಿದಂತಹ ಸಮಸ್ಯೆಗಳು :**

ನಮಗೆ ಹೆಂಗೆ ಟಿಕೇಟ್ ತೆಗೆದುಕೊಳ್ಳಬೇಕು ಆ ಊರುಗಳಿಗೆ ಎಷ್ಟು ಬಸ್‌ಚಾರ್ಜ್ ಅಂತ ಗೊತ್ತಿರಲಿಲ್ಲ. ಹೇಗೆ ಬೇಕೋ ಹಂಗೆ ಕಡಿಮೆ ಕಡಿಮೆ ದುಡ್ಡು ತೊಗೊಂಡು ಟಿಕೇಟ್ ಕೊಟ್ಟು ಬಿಡುತ್ತಿದ್ದೀವಿ. ಪ್ರಯಾಣಿಕರು ಸಹ ಈ ಊರಿಗೆ ಇಷ್ಟು ಬಸ್‌ಚಾರ್ಜ್ ಅಂತನು ಹೇಳುತ್ತಿರಲಿಲ್ಲ. ನಾನೇ ನನ್ನ ಕೈಯಿಂದ ನನ್ನ ದುಡ್ಡನ್ನು ಕಟ್ಟಿದ್ದೇನೆ. ಬಸ್ ಯಾವ ಊರಿಗೆ ಹೋಗುತ್ತಿದೆ ಅಂತ ಗೊತ್ತಿದ್ದರು. ಕಾಲೇಜ್ ಹುಡುಗರು ಬೇಕೂ ಅಂತಾನೇ ಪದೇ ಪದೇ ಬಂದು ಇದು ಯಾವ ಊರಿಗೆ ಹೋಗುತ್ತೇ ಅಂತ ಕೇಳುತ್ತಿದ್ದರು. ನಾನು ಈ ಬಸ್ ಇಂತ ಊರಿಗೆ ಹೋಗುತ್ತೇ ಅಂತ ಕೂಗುತ್ತಿದ್ದರೆ. ಒಳಗೆ ಕುಂತಿರುವ ಹುಡುಗರು ನಾನು ಹೇಳಿದ್ದೇನೆ. ವ್ಯಂಗ್ಯವಾಗಿ ರಿಪೀಟ್ ರಿಪೀಟ್ ಹೇಳುತ್ತಿದ್ದರು.

**ವೈವಾಹಿಕ ಸಮಸ್ಯೆ :**

ನನ್ನನ್ನು ನೋಡುವುದಕ್ಕೆ ಟೀಚರ್, ಕ್ಲರ್ಕ್ ಕೆಲಸದಲ್ಲಿರುವ ಬಂದಿದ್ದರು. ನಮ್ಮಂಗೆ ಈ ಹುಡುಗಿ ಒಪ್ಪಿಗೆಯಾಗಿದ್ದಾಳೆ. ಆದರೆ ಕೆಲಸ ಬಿಟ್ಟರೆ ಮಾತ್ರ ನಾನು ಮದುವೆಯಾಗುತ್ತೇನೆ ಅಂತ ಹೇಳಿ ಕಳುಹಿಸಿದರು. ಅದಕ್ಕೆ ಅವರಿಂದ ನಮ್ಮ ಅಮ್ಮ ಈ ಕೆಲಸ ಬಿಟ್ಟುಬಿಡು ಅಂತ ಹೇಳುತ್ತಿರುತ್ತಾರೆ. ದೊಡ್ಡವಳಾಗಿ ಇಷ್ಟು ವರ್ಷವಾದರು ಇನ್ನೂ ಮದುವೆಯಾಗಿಲ್ಲ ಅಂತ ಅಕ್ಕಪಕ್ಕದವರು ಮಾತಾಡಿಕೊಳ್ಳುತ್ತಿರುತ್ತಾರೆ. ಯಾವಾಗಲೂ ಗಂಡಸರ ಜೊತೇನೆ ಇರುವಾಗ ಮತ್ತೊಬ್ಬ ಗಂಡಸು ಯಾಕೆ ಬೇರೆ ಅಂತ ವ್ಯಂಗ್ಯವಾಗಿ ಮಾತನಾಡಿಕೊಳ್ಳುತ್ತಾರೆ.

**ಪ್ರಯಾಣಿಕರಿಂದ ಎದುರಿಸಿದಂತಹ ಸಮಸ್ಯೆಗಳು :**

**ಲೈಂಗಿಕ ಕಿರುಕುಳ :**

ನಾನು ಕುಂತುಕೊಳ್ಳುವ ಸೀಟಿನಲ್ಲಿ ಬೇಕೂ ಅಂತನೇ ಕೂತುಕೊಂಡು ಪುಸ್ತಕದ ಮೇಲಿರುವ ಅರೇ ಬರೇ ಬಟ್ಟೆ ಹುಟ್ಟಿರುವ ರೂಪದರ್ಶಿಯರ ಚಿತ್ರಗಳನ್ನು ಮತ್ತು ಪೇಪರ್‌ನಲ್ಲಿ ಬರುವ ಸಿನಿಮಾ ನಟಿಯರ ಅಶ್ಲೀಲ ಚಿತ್ರಗಳು ನನಗೆ ಕಾಣುವಂತೆ ಇಡುತ್ತಿರುತ್ತಾರೆ. ಅಲ್ಲಿ ಹೆಣ್ಣುಮಕ್ಕಳು ಹೋಗುತ್ತಿದ್ದರೆ. ಅವಳ ಎದೆ ಭಾಗ ಹೇಗಿದೆ ನೋಡೋ, ಅವಳ ಸೊಂಟ ಹೆಂಗಿವೆ ನೋಡು ಮಗ, ಅವಳ ತುಟಿ ಹೆಂಗಿದೆ ನೋಡು ಮಗ ಅವಳು ಸಿಕ್ಕರೆ ಹಂಗೇ ಕಚ್ಚಿತಿಂದು ಬಿಡುತ್ತೀನ ಅಂತ ಬೇಕೂ ಅಂತ ನನಗೆ ಕೇಳಿಸುವ

ಹಾಗೇ ಮಾತನಾಡುತ್ತಿರುತ್ತಾರೆ. ಟಿಕೇಟ್ ಕೇಳುವಾಗ ಎಷ್ಟು ಚಾರ್ಜ್ ಅಂತ ಕೇಳುವುದು ಬಿಟ್ಟು ನನ್ನ ಎದೆಯನ್ನು ಮತ್ತು ನನ್ನ ತುಟಿಯನ್ನು ನೋಡುತ್ತಾ ಅಲ್ಲಿಗೆ ಹೋಗುವುದಕ್ಕೆ ಎಷ್ಟು ಅಂತ ಕೇಳಿದಾ ಅದಕ್ಕೆ ನನಗೆ ತುಂಬಾ ಸಿಟ್ಟು ಬಂತು ಏನು ಸರಿಯಾಗಿ ಮಾತಾಡು ಅಂದಾಗ, ಅವತಯ ನನಗೆ ತುಂಬಾ ಬೇಜಾರು ಆಗುತ್ತಿರುತ್ತೆ ಆದರೆ ಬೇಜಾರು ಆದರೆ ಅವರಿಗೆ ಟಿಕೇಟ್ ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲ ಅದನೆಲ್ಲಿ ಕಿವಿಗೆ ಹಾಕಿಕೊಳ್ಳುವುದಿಲ್ಲ.

**ಸಹೋದ್ಯೋಗಿಗಳಿಂದ :**

ಕೆಲವು ಸಹೋದ್ಯೋಗಿಗಳು ನಮ್ಮನ್ನು ಅವರ ಜೊತೆ ಕೆಲಸ ಮಾಡುವ ಸಹೋದ್ಯೋಗಿಗಗಳು ಎಂದು ಕಾಣದೆ ಹೆಣ್ಣು ಎಂದೇ ಕಾಣುತ್ತಾರೆ. ಒಂದು ಸಾರೀ ರಾತ್ರಿ ೯-೧೦ ಗಂಟೆಯಾಗಿತ್ತು. ಅಷ್ಟೊತ್ತಿನಲ್ಲಿ ಬಸ್ ಕೆಟ್ಟು ಹೋಯಿತು. ಪ್ರಯಾಣಿಕರನ್ನೆಲ್ಲ ಬೇರೆ ಬಸ್‌ಗಳಿಗೆ ಹತ್ತಿಸಿ ಕಳುಹಿಸಿದೆ. ನಾನು ಮತ್ತು ಡ್ರೈವರ್ ಮಾತ್ರ ಇದ್ದೆವು. ಅದು ಬಸ್ ಕೆಟ್ಟು ಹೋಗಿರುವುದು ಅಡವಿಯಲ್ಲಿ ನಮ್ಮದೆ ಲಾಸ್ಟ್ ಬಸ್. ಅಲ್ಲಿ ಬೇರೆ ಯಾವ ವೇಕಲ್ ಓಡಾಡುವುದಿಲ್ಲ. ಜನರು ಸಹ ಯಾರು ಓಡಾಡುತ್ತಿರಲಿಲ್ಲ. ಅಂತ ಸಮಯದಲ್ಲಿ ಡ್ರೈವರ್ ನನ್ನನ್ನು ನೀನು ಮೇಲೆ ಮಲಗು ನಾನು ಕೆಳಗೆ ಮಲಗುತ್ತೇನೆ ಎಂದು ಹೇಳಿದ ನನಗೆ ತುಂಬಾ ಭಯವಾಯಿತು. ಇಂಗೆಲ್ಲ ಮಾಡುವುದು ಸರಿಯಲ್ಲ. ನಾನು ಮ್ಯಾನೇಜರ್‌ಗೆ ಕಂಪ್ಲೆಂಟ್ ಮಾಡುತ್ತೇನೆ ಎಂದು ಎದುರಿಸಿದ್ದರು. ನನ್ನನ್ನು ಹಿಡಿದುಕೊಳ್ಳುವುದಕ್ಕೆ ಬರವಾಷ್ಟರಲ್ಲಿ ಮೆಕಾನಿಕ್‌ಗಳು ಬಂದರು. ಅವತ್ತು ನಾನು ಉಳಿದುಕೊಂಡೇ ಅವತ್ತಿನಿಂದಾ ನಾನು ಆ ಡ್ರೈವರ್ ಜೊತೆ ಡ್ಯೂಟಿಗೆ ಹಾಕಿಸಿಕೊಳ್ಳುವುದಿಲ್ಲ.

ಊಟಕ್ಕೆ ಕೂತಾಗ ಕಣ್ಣಿಂದಾ ಸನ್ನೆ ಮಾಡುವುದು, ಕೈಯನ್ನು ಬೇಕೂ ಅಂತಾನೇ ಹಿಡಿದುಕೊಳ್ಳುವುದು, ಏನೇ ಹೋಗೆ ಬಾರೆ ಅಂತ ಏಕವಚನದಿಂದ ಮಾತನಾಡಿಸುತ್ತಾರೆ. ಕೆಲವು ಸಹೋದ್ಯೋಗಿಗಳು.

**ಮೇಲಾಧಿಕಾರಿಗಳಿಂದ ಎದುರಿಸುವಂತಹ ಸಮಸ್ಯೆಗಳು :**

ಕಂಟ್ರೋಲರ್‌ಗಳು ನಾವು ಹೇಳಿದ ಕಡೆ ಡ್ಯೂಟಿಗೆ ಹಾಕುವುದಿಲ್ಲ. ಬೇರೆಯವರಿಗೆಲ್ಲ ಅವರಿಗೆ ಬೇರೆ ಯಾವುದಾದರೂ ಕೆಲಸ ಇದ್ದರೆ ಅಥವಾ ಆರೋಗ್ಯ ಸರಿ ಇಲ್ಲದಿದ್ದಾಗ ಅವರು ಕೇಳಿದ ಡ್ಯೂಟಿಗೆ ಹಾಕುತ್ತಾರೆ. ನನಗೆ ತುಂಬಾ ಹುಷಾರು ಇಲ್ಲ ಅಂದರು ನಾನು ಕೇಳಿದ ಡ್ಯೂಟಿಗೆ ಹಾಕುವುದಿಲ್ಲ.

ಒಂದು ೫ ಜನ ಪ್ರಯಾಣಿಕರು ಟಿಕೇಟ್ ತೆಗೆಸಿಕೊಳ್ಳದೇ ಹಾಗೆ ಕೂತಿದ್ದಾರೆ. ಅದು ನಾನು ಕೇಳಿದರು ತೆಗೆಸಿಕೊಂಡಿದ್ದೇವೆ ಎಂದರು ನಮನ ಅಂದೆ ಆದರೆ ಚಕಿಂಗ್ ಆಫೀಸರ್ ಬಂದಾಗ ಕೇಳಿದರೆ ಟಿಕೇಟ್ ಇರಲಿಲ್ಲ ನೀನು ಬೇಕೂ ಅಂತನೇ ಟಿಕೇಟ್ ತೆಗೆದುಕೊಂಡಿಲ್ಲ ದುಡ್ಡು ಮಾಡುವುದಕ್ಕೆ ಈ ರೀತಿ ಮಾಡಿದ್ದಿಯ ಎಂದು ಕೇಸ್ ಮಾಡಿ ಬಿಟ್ಟರು. ಮ್ಯಾನೇಜರ್ ಹತ್ತಿರ ಬರುತ್ತೀಯ ಎಂದರೆ ನಾನು ಈ ಕೇಸನ್ನು ಇಲ್ಲಿಯೇ ಮುಚ್ಚಿ ಹಾಕುತ್ತೇನೆ. ಇಲ್ಲದಿದ್ದರೆ ಈ ಕೇಸ್ ಡಿ.ಸಿ ಹತ್ತಿರ ಹೋಗುತ್ತೆ ಅಂತ

ಹೆದರಿಸಿದರು. ಆದರೆ ನಾನು ನನಗೆ ಕೆಲಸ ಇರಲಿಲ್ಲ ಅಂದರೆ ಪರವಾಗಿಲ್ಲ ನಾನು ಮಾತ್ರ ಇದನ್ನ ಒಪ್ಪಿಕೊಳ್ಳುವುದಿಲ್ಲ ಎಂದು ಅಂದು ಬಿಟ್ಟೆ ನೀವು ಈ ರೀತಿ

**ಮೂಲಭೂತ ಸೌಲಭ್ಯಗಳ ಕೊರತೆ :**

ಶೌಚಾಲಯದ ವ್ಯವಸ್ಥೆ ಇಲ್ಲದ್ದ ಮನ್‌ಸನ್ ಆದಾಗ ತುಂಬಾ ಸಮಸ್ಯೆ ವಿಶ್ರಾಂತಿ ಸ್ಥಳ ಇಲ್ಲದ್ದರಿಂದ ತುಂಬಾ ತೊಂದರೆಯಾಗಿದೆ. ವಸತಿಗೃಹ ಇಲ್ಲದ ಕಾರಣ ನಮ್ಮ ಮನೆ ಡಿಪೋದಿಂದ ತುಂಬಾ ದೂರವಿದೆ. ಡ್ಯೂಟಿ ಮುಗಿಸಿ ರಾತ್ರಿ ಮನೆಗೆ ಬರುವಾಗ ಮಧ್ಯದಲ್ಲಿ ಕುಡಿದವರು, ಪುಂಟ ಪೋಕಿರಿಗಳು ಫಿಗರ್ ಹೋಗ್ತಾ ಇದೆ ಅಂತ ಅನ್ನುವುದು ಕುಡುಕರು ಹಿಂಬಾಲಿಸಿಕೊಂಡು ಬರುತ್ತಿರುತ್ತಾ. ಆದರೆ ಅನಿವಾರ್ಯ ಮಾತನೆಲ್ಲ ಕೇಳುತ್ತಾ ಹಾಗೇ ಮುಂದೇ ಹೋಗುತ್ತೇನೆ.

೩. ರಾಜಮ್ಮ (ಹೆಸರು ಬದಲಾಯಿಸಲಾಗಿದೆ) ಕೂಡ್ಲಿಗಿ ಡಿಪೋದಲ್ಲಿ ಕಾರ್ಯನಿರ್ವಹಿಸುವ ೨೪ ಮಹಿಳಾ ಕಂಡಕ್ಟರ್‌ಗಳಲ್ಲಿ ಇವರೂ ಕೂಡ ಒಬ್ಬರಾಗಿದ್ದಾರೆ. ಅವರನ್ನು ಸಂದರ್ಶಿಸಲು ಹೋದಾಗ ರಾತ್ರಿ ೮.೩೦ ಆಗ ಅವರು ಡ್ಯೂಟಿಯಿಂದ ಇನ್ನೂ ಮನೆಗೆ ಬಂದಿರಲಿಲ್ಲ. ೯.೩೦ ಸಮಯ ಆಯಿತು ಬರಲಿಲ್ಲ. ಸುಮಾರು ರಾತ್ರಿ ೧೦.೦೦ ಗಂಟೆಯಾಗಿತ್ತು. ಆಗ ಅವರು ಡ್ಯೂಟಿ ಮುಗಿಸಿಕೊಂಡು ಬಂದರು. ಅವರ ಮುಖದಲ್ಲಿ ಕಳೆನೇ ಇರಲಿಲ್ಲ. ತುಂಬಾ ಸುಸ್ತಾಗಿದ್ದರು. ಅಂತ ಹೇಳಿದೆ. ಅವರ ಸಮಸ್ಯೆಗಳ ಬಗ್ಗೆ ಕೇಳಿದಾಗ ಹೇಳುತ್ತಾ ಹೋದರು. ಅದನ್ನು ಅವರ ಮಾತಲ್ಲಿ ಬಿಂಬಿಸಲಾಗಿದೆ.

ನನ್ನ ಹೆಸರು ನನ್ನ ಗಂಡನ ಹೆಸರು ಪರಶುರಾಮ. ಮದುವೆಯಾ ೫ ವರ್ಷವಾಯಿತು. ಕೆಲಸಕ್ಕೆ ಸೇರಿ ೫ ವರ್ಷವಾಯಿತು. ನಮ್ಮ ಮೆಯವರು ನನ್ನ ಜೊತೆ ಇಲ್ಲ ನನ್ನನ್ನು ಬಿಟ್ಟು ಹೋಗಿದ್ದಾರೆ. ನಾನು ಈ ಕೆಲಸ ಬಿಟ್ಟರೆ ಅವರು ನನ್ನ ಹತ್ತಿರ ಬರುತ್ತಾರಂತೆ ಇಲ್ಲ ಅಂದರೆ ಬರುವುದಿಲ್ಲವಂತೆ. ಏಕೆಂದರೆ ನಾನು ನಮ್ಮ ಜೊತೆ ಕೆಲಸ ಮಾಡುವ ಡ್ರೈವರ್‌ಗಳನ್ನು ಮಾತನಾಡಿಸಬಾರದಂತೆ. ಪರಪುರುಷರನ್ನು ಮಾತನಾಡಿಸಬಾರದಂತೆ ಡ್ರೈವರ್ ಜೊತೆ, ಪುರುಷ ಕಂಡಕ್ಟರ್ ಜೊತೆ ಕ್ಲೋಜ್ ಆಗಿ ಮಾತಾಡಿದನ್ನು ನೋಡಿ ನಿನಗೆ ಅವನ ಜೊತೆ ಸಂಬಂಧ ಇದೆ. ಅದಕ್ಕೆ ನೀನು ಅವನನ್ನು ಮಾತನಾಡಿಸುತ್ತೀಯ ಅಂತ ಅನುಮಾನ ಪಡುತ್ತಾರೆ. ಬಸ್ ಕೆಟ್ಟು ಹೋದಾಗ ಮನೆಗೆ ತಡವಾಗಿ ಬಂದರೆ ನೀನು ಯಾರ ಜೊತೆ ಮಲಗಿಕೊಳ್ಳುವುದಕ್ಕೆ ಹೋಗಿದೆ ಅಂತ ಕೆಟ್ಟ ಕೆಟ್ಟ ಮಾತುಗಳನ್ನಾಡುತ್ತಾರೆ. ಅದಕ್ಕೆ ನೀನು ಈ ಕೆಲಸ ಬಿಟ್ಟು ಬಿಡು ಅಂತ ಹೇಳುತ್ತಾರೆ. ನಮ್ಮ ಮನೆಯವರಿಗೆ ಕೆಲಸ ಇಲ್ಲ ಕುಡಿಯುವುದು ದಿನ ಬಂದು ಜಗಳ ಮಾಡುವುದು ಮಾಡುತ್ತಾರೆ.

ಕೆಲಸದ ಸ್ಥಳದಲ್ಲಿರುವ ಸಮಸ್ಯೆಗಳ ಬಗ್ಗೆ ಕೇಳಿದ್ದಾಗ ಡಿಪೋದಲ್ಲಿ ಸಹೋದ್ಯೋಗಿಗಳು ನಮಗೆ ಗೌರವವನ್ನೇ ಕೊಡುವುದಿಲ್ಲ. ನಾವು ಅಂದರೆ ಕೀಳು ದೃಷ್ಟಿಯಿಂದ ನೋಡುತ್ತಾರೆ. ನಮಗೆ ಮರ್ಯಾದೇನೆ ಕೊಡುವುದಿಲ್ಲ. ಮೇಲಾಧಿಕಾರಿಗಳು ನಿಗದಿತ ಸಮಯಕ್ಕಿಂತ ಹೆಚ್ಚು ಕೆಲಸ ಮಾಡಿಸಿಕೊಳ್ಳುತ್ತಾರೆ. ಅವರು

ಹೇಳಿದಷ್ಟು ಸಮಯ ಕೆಲಸ ಮಾಡಲಿಲ್ಲ ಅಂದರೆ ಕಲೆಕ್ಷನ್ ತರಲಿಲ್ಲ ಅಂದರೆ ಬಾಯಿಗೆ ಸಿಕ್ಕ ಹಾಗೆ ಮಾತನಾಡುತ್ತಾರೆ. ಸ್ವಲ್ಪ ಹೊತ್ತು ನಿದ್ದೇನೆ ಬರುವುದಿಲ್ಲ. ಮನಸ್ಸಿಗೆ ತುಂಬಾ ನೋವಾಗುತ್ತದೆ. ಅವರು ಹೇಳಿದ ಹಾಗೆ ಕೇಳಲಿಲ್ಲ ಅಂದರೆ ದಿನ ಯಾವ ರೂಟ್‌ಗೆ ಹೋಗುತ್ತೆವೆಯೋ ಆ ರೂಟನ್ನು ಚೇಂಜ್ ಮಾಡಿ ತುಂಬಾ ರಶ್ ಇರುವ ಕಡೆ ಡ್ಯೂಟಿಗೆ ಹಾಕುತ್ತಾರೆ. ರಶ್ ಇದ್ದಾಗ ಬೇಗ ಬೇಗ ಟಿಕೇಟ್ ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲ. ೫ ನಿಮಿಷಕ್ಕೆ ಒಮ್ಮೆ ಬಂದು ಬಿಡುತ್ತೆ ಅಂತ ಸಮಯದಲ್ಲಿ ಬೇಕೂ ಅಂತನೇ ಚಕಿಂಗ್ ಆಫೀಸರ್‌ನನ್ನು ಕಳುಹಿಸಿಬಿಡುತ್ತಾರೆ. ಮ್ಯಾನೇಜರ್ ಆಗವರು ನೀನು ಬೇಕೂ ಅಂತನೇ ಟಿಕೇಟ್ ತೆಗೆದುಕೊಂಡಿಲ್ಲ ಅಂತ ಕೇಶ್ ಮಾಡುತ್ತಾರೆ. ಹೀಗೆ ಮೇಲಾಧಿಕಾರಿಗಳು ನಾವು ಕೆಲಸ ಮಾಡುವುದಕ್ಕೆ ಸಹಕಾರ ಕೊಡುವುದಿಲ್ಲ.

ನನಗೆ ಮದುವೆಯಾಗಿ ೫ ವರ್ಷವಾದರೂ ಮಕ್ಕಳು ಆಗಿಲ್ಲ. ಅಂತ ನನ್ನ ಅತ್ತೆ, ಮಾವ ಬೈಯುತ್ತಿರುತ್ತಾರೆ. ನೀನು ಗೊಡ್ಡಿ, ಬಂಜೆ ಅಂತ ಯಾವಾಗಲೂ ಹೀಯಾಳಿಸಿ. ಮಾತನಾಡುತ್ತಾರೆ. ನಾವು ನಮ್ಮ ಮಗನಿಗೆ ಬೇರೆ ಮದುವೆ ಮಾಡುತ್ತೇವೆ ನೀನು ಕೆಲಸ ಮಾಡಿ ತಂದಾಕು ಅಂತ ಹೇಳುತ್ತಾರೆ. ಕೆಲಸಕ್ಕೆ ಪ್ರಾರಂಭದಲ್ಲಿ ಪದೇ ಪದೇ ಗರ್ಭಪಾತವಾಗಿದ್ದರಿಂದ ಮತ್ತೆ ಮಕ್ಕಳಾಗಲೇ ಇಲ್ಲ.

ನಾನು ಮುಂದೆ ಓದಬೇಕು ಅಂತ ಆಸೆ ಇದೆ. ಆದರೆ ದಿನದ ಹೆಚ್ಚಿನ ಸಮಯವೇ ಇರುವುದರಿಂದ ಕೆಲಸ ಮುಗಿಸಿ ಮನೆ ಬರುಷ್ಟರಲ್ಲಿ ತುಂಬಾ ಸುಸ್ತಾಗಿರುತ್ತೇವೆ. ಓದುವುದಕ್ಕೆ ಆಗುವುದಿಲ್ಲ. ನನಗೆ ಹಾಡುವ ಅಭ್ಯಾಸ ಇದೆ. ಈ ಕೆಲಸದ ಒತ್ತಡದಲ್ಲಿ ಈ ಎಲ್ಲಾ ಅಭ್ಯಾಸಗಳು ಮರೆತು ಹೋಗಿದ್ದೇನೆ. ಬಸ್ ಕೆಟ್ಟು ಹೋದಾಗ ಡಿಪೋದಿಂದಾ ಬೇಗಾ ಮೆಕಾನಿಕ್‌ಗಳನ್ನು ಕಳುಹಿಸುವುದಿಲ್ಲ. ತುಂಬಾ ನೆಗ್‌ಲೆಟ್ ಮಾಡುತ್ತಾರೆ.

# ೩. ಗ್ರಂಥಋಣ


೧. ಅನುಪಮ ನಿರಂಜನ ಡಾ, **ಸ್ತ್ರೀಸ್ವಾಸ್ಥ್ಯ ಸಂಹಿತೆ,** ಪಬ್ಲಿಕೇಶನ್ಸ್ ಡಿ.ವಿ.ಕೆ ಮೂರ್ತಿ ಕೃಷ್ಣಮೂರ್ತಿ ಪುರಂ, ಮೈಸೂರು, ೧೯೯೪

೨. ಆಂಜನಪ್ಪ ಬಿ.ಎಚ್, **ಮಹಿಳೆ ಮತ್ತು ದುಡಿಮೆ,** ಪಬ್ಲಿಕೇಶನ್ ಸೃಷ್ಟಿ, ಬೆಂಗಳೂರು, ೨೦೦೬

೩. ಇಂದಿರಾ ಹಾಲಂಬಿ, **ಚಿತ್ತವೃತ್ತದ,** ಪ್ರಕಾಶನ, ಸಂದೀಪ ಸಾಹಿತ್ಯ ಆತ್ತಾಡಿ, ೧೯೯೩

೪. ಇಂದಿರಾ ಆರ್, **ಮಹಿಳೆ ಸಮಾಜ ಮತ್ತು ಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೫. ಇಂದಿರಾ ಕೃಷ್ಣಪ್ಪ, **ನಮ್ಮ ಮಗಳು, ನಮ್ಮ ಶಕ್ತಿ,** ಪಬ್ಲಿಕೇಶನ್, ಪ್ರೊ.ಬಿ.ಕೃಷ್ಣಪ್ಪ ಟ್ರಸ್ಟ್, ಬೆಂಗಳೂರು, ೨೦೦೪

೬. ಉಷಾ ಎಂ, **ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೭. ಒಡೆಯರ್ ಡಿ. ಹೆಗ್ಗಡೆ, ಎನ್.ಅನ್ನಪೂರ್ಣೇಶ್ವರಿ, **ಭಾರತದ ಆರ್ಥಿಕಾಭಿವೃದ್ಧಿ,** ಪ್ರಕಾಶನ, ಅರ್ಜುನ್ ಪಬ್ಲಿಷಿಂಗ್, ಮೈಸೂರು, ೨೦೦೬

೮. ಕಮಲ ಹಂಪನಾ ಡಾ. ಬೊಗಸೆ, **ಮಹಿಳೆ ಸುತ್ತಮುತ್ತ,** ಪಬ್ಲಿಕೇಶನ್ ಸಿ.ವಿ.ಜಿ, ಮೈಸೂರು, ೨೦೦೩

೯. ಗಾಯಿತ್ರಿ ಎನ್, **ಮಹಿಳೆ ಬಿಡುಗಡೆಯ ಹಾದಿಯಲ್ಲಿ,** ನವ ಕರ್ನಾಟಕ ಪಬ್ಲಿಕೇಶನ್, ಬೆಂಗಳೂರು, ೧೯೯೬

೧೦. ಚಂದ್ರಶೇಖರ್ ಸಿ.ಆರ್, **ಮಹಿಳೆಯರ ಮಾನಸಿಕ ಅಸ್ವಸ್ಥತೆಗಳು,** ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

೧೧. ಚಂದ್ರಶೇಖರ್ ಟಿ.ಆರ್, **ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೨. ಚಂದ್ರಶೇಖರ್ ದಾಮ್ಲೆ, ಪ್ರೊ.ಪಿ.ನಾಗನೂರಿ, **ಸಮಾಜಶಾಸ್ತ್ರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೩. ಚಂದ್ರಶೇಖರ್ ದಾಮ್ಲೆ, **ಸಮಾಜಶಾಸ್ತ್ರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೪. ಜಯಮ್ಮ ಕರಿಯಣ್ಣ ಎಚ್, **ಹೆಣ್ಣಿನ ಸ್ಥಾನಮಾನ**, ಜಯಾ ಪ್ರಕಾಶನ, ಬೆಂಗಳೂರು, ೨೦೦೦

೧೫. ನೇಮಿಚಂದ್ರ, **ಮಹಿಳಾ ಲೋಕ**, ಪ್ರಕಾಶನ, ನವ ಕರ್ನಾಟಕ, ಬೆಂಗಳೂರು, ೨೦೦೫

೧೬. ಮಂಗಳ ಪ್ರಿಯದರ್ಶಿನಿ, **ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೧೭. , **ಮನೋವಿಜ್ಞಾನ ಮನಸ್ಸು ಮತ್ತು ಅದರ ಜಗತ್ತು**, ಪ್ರಕಾಶನ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೩

೧೮. ವಿಜಯಶ್ರೀ ಸಬರದ, **ಮಹಿಳೆ ಶೋಷಣೆ ಮತ್ತು ಸವಾಲುಗಳು**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫

೧೯. ಶ್ರೀಮತಿ ಎಚ್.ಎಸ್, **ಗರ್ಭಾಶಯ-ಮಹಿಳೆಯರ ಶಕ್ತಿ ಕೇಂದ್ರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೦. ಶ್ರೀಮತಿ ಎಚ್.ಎಸ್, **ಸ್ತ್ರೀವಾದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೨೧. ಶ್ರೀಮತಿ ಎಚ್.ಎಸ್, **ಹೆಣ್ಣು-ಹೆಂಗಸು**, ಬ್ಯಾಲದಕೆರೆ ಪ್ರಕಾಶನ, ಮಂಡ್ಯ ಜಿಲ್ಲೆ, ೨೦೦೪

೨೨. ಶ್ರೀಮತಿ ಎಚ್.ಎಸ್, ಶಿವಾನಂದ ಎಸ್ ವಿರಕ್ತಮಠ ಡಾ.ಕೃಷ್ಣ ಜೆ, **ಮಹಿಳೆ ದುಡಿಮೆ ಮತ್ತು ಬಿಡುವು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೨೩. ಶಂಕರರಾವ್, ಚ.ನ, **ಭಾರತೀಯ ಸಮಾಜ**, ಪ್ರಕಾಶನ, ಜೈ ಭಾರತ್, ಬೆಂಗಳೂರು, ೨೦೦೦

೨೪. ಸರೋಜ ಕೆ, **ಮಹಿಳೆ ಮತ್ತು ಆರೋಗ್ಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೫. ಹೇಮಲತಾ ಎಚ್.ಎಂ, **ಮಹಿಳಾ ಅಧ್ಯಾಯ ಭಾಗ ೧**, ಪ್ರಕಾಶನ, ಡಿ.ವಿ.ಕೆ ಮೂರ್ತಿ, ಮೈಸೂರು, ೨೦೦೪

**ಲೇಖನಗಳು**

೧. ಅಂಜಲಿ ರಾಯಣ್ಣ, **ದುಡಿಯುವ ಮಹಿಳೆಯರ ಗಳಿಕೆಯ ಜತೆಗಿನ ಆತಂಕಗಳು**, ವಿಜಯ ಕರ್ನಾಟಕ, (ಮಹಿಳಾ ವಿಜಯ), ೨೦.೧೨.೨೦೦೬

೨. ಕಿರಣ್ ಪ್ರಸಾದ್, **ಖಿನ್ನತೆಯೆಂಬ ಕಂದಕದಲ್ಲಿ ಕಾಲಿಡಬೇಡಿ**, ವಿಜಯ ಕರ್ನಾಟಕ, (ಮಹಿಳಾ ವಿಜಯ), ೨೬.೧೨.೨೦೦೬

೩. ಚಂದನಾ ಸಿಂಗ್, ಗೋಡೆಗಳಿಲ್ಲದೆ ಕೊಠಡಿಯಲ್ಲಿ, ಉದಯವಾಣಿ, (ಮಹಿಳಾ ಸಂಪದ), ೧೮.೧೧.೨೦೦೬

೪. ಪ್ರಭಾ ಶರ್ಮ ಎಚ್, ದುಡಿಯುವ ಮಹಿಳೆಗೆ ಕಾನೂನು ಕೈಪಿಡಿ, ವಿಜಯ ಕರ್ನಾಟಕ, (ಮಹಿಳಾ ವಿಜಯ), ೧೪.೦೯.೨೦೦೨

೫. ಮಲ್ಲಿಕಾರ್ಜುನ ಸಿದ್ದಣ್ಣ, ಭಾರಿ ವಾಹನ ಚಾಲನೆ ಲೈಸೆನ್ಸ್ ಇದ್ದರೂ ಬಸ್ ಚಾಲಕ ಹುದ್ದೆ ನೀಡಲು ಕೆಎಸ್‌ಆರ್‌ಟಿಸಿ ಮೀನಾಮೇಷ, ಕನ್ನಡ ಪ್ರಭ, ೧೫.೦೬.೨೦೦೨

೬. ಮಂಗಳ ಕೆ.ಆರ್, ಮಹಿಳೆ ಪೂರ್ವ, ಪಶ್ಚಿಮ ಮುಖ, ಪ್ರಜಾವಾಣಿ, ಸಾಪ್ತಾಹಿಕ ಪುರವಣಿ, ೧೬.೦೪.೨೦೦೬

೭. ಮಂಗಳಾ ಕೆ.ಆರ್, ಅತ್ತೆ-ಸೊಸೆ ಜಗಳಕ್ಕೆ ಅಂತ್ಯವಿಲ್ಲವೇ, ಪ್ರಜಾವಾಣಿ, ಭೂಮಿಕಾ, ೦೮.೦೭.೨೦೦೬

೮. ಮಾಲಾ, ಹೊರಗೆಲಸದ ಮಹಿಳೆಗೆ ಮನೆಗೆಲಸ ಹೊರೆಯಾಗದಿರಲಿ, ವಿಜಯ ಕರ್ನಾಟಕ, (ಮಹಿಳಾ ವಿಜಯ), ೦೩.೦೭.೨೦೦೭

೯. ರೋಹಿಣಿ ಶಿವಾನಂದ, ದುಡಿಮೆಯ ಬಾಳು ತಪ್ಪದ ಗೋಳು, ವಿಜಯ ಕರ್ನಾಟಕ, (ಮಹಿಳಾ ವಿಜಯ), ೦೩.೦೭.೨೦೦೭

೧೦. ವಿಶಾಲಾಕ್ಷಿ ಅಕ್ಕಿ, ಇಂದು ಕಂಡಕ್ಟರ್ ನಾಳೆ ಡ್ರೈವರ್, ಪ್ರಜಾವಾಣಿ, ಭೂಮಿಕಾ, ೦೭.೦೫.೨೦೦೫

೧೧. ಶಶಿಪ್ರಭಾ ಹಿರೇಮಠ, ವೇತನ ತರುವ ವನಿತೆಯ ವೇದನೆ, ವಿಜಯ ಕರ್ನಾಟಕ, (ಮಹಿಳಾ ವಿಜಯ), ೧೯.೦೯.೨೦೦೬

೧೨. ಶಶಿರೇಖಾ ನಾಗೇಂದ್ರ, ಉದ್ಯೋಗಸ್ಥ ಮಹಿಳೆಯರಿಗೊಂದು ಕಿವಿಮಾತು, ಸಂಯುಕ್ತ ಕರ್ನಾಟಕ, ಸಿಂಧೂರ, ೧೦.೦೪.೨೦೦೬

೧೩. ಶೀಲಾ ಸಿ ಶೆಟ್ಟಿ, ನಿರ್ವಾಹಕಿಯರ ಸಮಸ್ಯೆಗೆ ಎಲ್ಲಿದೆ ಸ್ವಾಪ್?, ವಿಜಯ ಕರ್ನಾಟಕ, ಬೆಂಗಳೂರು ವಿಜಯ, ೨೧.೦೫.೨೦೦೭

೧೪. ಸಹನಾ, ಬಳುಕುವ ಲಾರಿ ನಗುವ ಲಟ್ಟಣಿಗೆ, ಪ್ರಜಾವಾಣಿ, ೦೯.೦೩.೨೦೦೨

೧೫. ಸಂಚೇತ ನಾಯಕ್, ದುಡಿಮೆಯ ಹಾದಿಯಲ್ಲಿ ನಲುಗುವ ತಾಯಿ, ಪ್ರಜಾವಾಣಿ, ಭೂಮಿಕಾ, ೦೮.೦೭.೨೦೦೬

೧೬. ಸರಸ್ವತಿ ಧನಂಜಯ, ಸಮಾನತೆಯ ಹಗ್ಗಾ ಜಗ್ಗಾಟ, ಪ್ರಜಾವಾಣಿ, ಭೂಮಿಕಾ, ೧೯.೦೫.೨೦೦೭

ಮಹಿಳಾ ಅಧ್ಯಯನ ಪತ್ರಿಕೆಗಳು :


೧. ಶ್ರೀಮತಿ ಎಚ್.ಎಸ್ (ಸಂ) ಮಹಿಳಾ ಅಧ್ಯಯನ (ಸಂಪುಟ ೧) (ಸಂಚಿಕೆ ೧), ಜನವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨. ಶ್ರೀಮತಿ ಎಚ್.ಎಸ್ (ಸಂ) ಮಹಿಳಾ ಅಧ್ಯಯನ (ಸಂಪುಟ ೧) (ಸಂಚಿಕೆ ೨), ಜುಲೈ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩. ಶ್ರೀಮತಿ ಎಚ್.ಎಸ್ (ಸಂ) ಮಹಿಳಾ ಅಧ್ಯಯನ (ಸಂಪುಟ ೨) (ಸಂಚಿಕೆ ೧), ಜನವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪. ಶ್ರೀಮತಿ ಎಚ್.ಎಸ್ (ಸಂ) ಮಹಿಳಾ ಅಧ್ಯಯನ (ಸಂಪುಟ ೨) (ಸಂಚಿಕೆ ೨), ಜನವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೫. ಶ್ರೀಮತಿ ಎಚ್.ಎಸ್ (ಸಂ) ಮಹಿಳಾ ಅಧ್ಯಯನ (ಸಂಪುಟ ೩) (ಸಂಚಿಕೆ ೧), ಜನವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧


ಮಾಸಿಕ ಪತ್ರಿಕೆಗಳು


೧. ಉಷಾ ದೀಪಕ್, ಪೈಪೋಟಿ ಬೇಡ ಸಹಕಾರ ಬೇಕು, ಗೃಹಶೋಭಾ, ಮೇ ೨೦೦೬

೨. ಗೃಹಶೋಭಾ, ದುಡಿಯುವ ಮಹಿಳೆ ಬಳಲಿಕೆ ಬೇಸರ, ಬೈಗಳು, ಪುಟ ೪೪-೪೫, ಮೇ ೨೦೦೬

೩. ಗೃಹಶೋಭಾ, ಸೆಕ್ಸ್, ವೃತ್ತಿನಿರತ ಮಹಿಳೆಯರ ತೊಂದರೆಗಳು, ಮೇ ೨೦೦೬

೪. ಗೃಹಶೋಭಾ, ಗಳಿಸುವ ಹೆಂಡತಿ ಗಂಡನ ಆಸ್ತಿಯೇ?, ಮೇ ೨೦೦೬

೫. ಪ್ರೊ.ಪ್ರವೀಣ ಬಾಬು, ಮಹಿಳೆಯರಿಗೆ ಲೈಂಗಿಕ ಕಿರುಕುಳ ಮತ್ತು ಇದಕ್ಕೆಲ್ಲಿ ಕೊನೆ?, ಪ್ರಿಯಾಂಕ, ೦೨.೦೯.೨೦೦೬

೬. ಭಾಸ್ಕರರಾಮ ಎಂ.ಕೆ, ಮನೆ ಹೊರಗೂ ಸ್ವಾಸ್ಥ್ಯ ಮಹಿಳೆಗೆ ಹೊಣೆ, ಸುಧಾ, ೨೦.೦೬.೨೦೦೨

೭. ರಶ್ಮಿ ಎನ್, ಬಸ್ ನಿರ್ವಹಣೆಯ ಬವಣೆ, ಸುಧಾ, ಜನವರಿ ೨೦೦೩

೮. ಮಂಜುಳಾ ಸಿ.ಜಿ, ದುಡಿಯುವ ಮಹಿಳೆ ಹೊಸ ಮುಗ್ಗಲು ಪೆಟ್ರೋಲ್ ಬಂಕ್ ಪ್ರವೇಶ, ಸುಧಾ, ೦೨.೦೧.೨೦೦೩

